# ಸಾಹಿತ್ಯ ಸಂಪ್ರತಿ–೧

ಬಿ.ಎ./ಬಿ.ಎಸ್.ಡಬ್ಲ್ಯೂ ಮೊದಲ ಸೆಮಿಸ್ಟರ್ ನೂತನ ಕನ್ನಡ ಪಠ್ಯಕ್ರಮಕ್ಕೆ
ಅನುಗುಣವಾಗಿ ಸಿದ್ಧಪಡಿಸಿದ ಪುಸ್ತಕ

**(Ability Enhancement Compulsory Course)**


ಪ್ರಧಾನ ಸಂಪಾದಕರು

**ಪ್ರೊ. ಗುಂಡಣ್ಣ ಕಲಬುರ್ಗಿ**

ಸಂಪಾದಕರು

**ರಾಮರೆಡ್ಡಿ ಕೆ.**

**ಡಾ. ರಾಜಶೇಖರ ಬಿರಾದಾರ**



**ಪ್ರಸಾರಾಂಗ**

**ರಾಣಿ ಚನ್ನಮ್ಮ ವಿಶ್ವವಿದ್ಯಾಲಯ, ವಿದ್ಯಾಸಂಗಮ**

**ಬೆಳಗಾವಿ**

**೨೦೨೪ ರಿಂದ ಅನ್ವಯ**

**SAHITYA SAMPRATI-1 :** Chief Editor, Prof. Gundanna Kalaburgi, Editors-Ramareddy K. and Dr. Rajashekhar Biradar. Published by : Dr. Pooja P. Halyal, Director, Prasaranga, Rani Channamma University, Belagavi. Dr. Sachindra G.R., Asst. Director, Prasaranga, Rani Channamma University, Belagavi. © : Publisher, First Impression: 2024, Pages: XIV+153=167, Price:    DTP & Page Layout : Dr. Savakar S. Kamble

**ಸಾಹಿತ್ಯ ಸಂಪ್ರತಿ–೧**

ಪ್ರಧಾನ ಸಂಪಾದಕರು: **ಪ್ರೊ. ಗುಂಡಣ್ಣ ಕಲಬುರ್ಗಿ**
ಮುಖ್ಯಸ್ಥರು
ಶಾಸ್ತ್ರೀಯ ಕನ್ನಡ ಭಾಷಾ ಅಧ್ಯಯನ, ಸಂಸ್ಥೆ

ಸಂಪಾದಕರು : **ರಾಮರೆಡ್ಡಿ ಕೆ.**
**ಡಾ. ರಾಜಶೇಖರ ಬಿರಾದಾರ**

ಪ್ರಕಾಶಕರು: **ಡಾ. ಪೂಜಾ ಪ. ಹಲ್ಯಾಳ**
ನಿರ್ದೇಶಕರು, ಪ್ರಸಾರಾಂಗ
ರಾಣಿ ಚನ್ನಮ್ಮ ವಿಶ್ವವಿದ್ಯಾಲಯ, ಬೆಳಗಾವಿ.
ಮೊಬೈಲ್ ನಂ: 99645 05798

**ಡಾ. ಸಚಿಂದ್ರ ಜಿ. ಆರ್.**
ಸಹಾಯಕ ನಿರ್ದೇಶಕರು, ಪ್ರಸಾರಾಂಗ
ರಾಣಿ ಚನ್ನಮ್ಮ ವಿಶ್ವವಿದ್ಯಾಲಯ, ಬೆಳಗಾವಿ.
ಮೊಬೈಲ್ ನಂ: 94807 65989



ಪ್ರಥಮ ಮುದ್ರಣ: ೨೦೨೪
ಪುಟಗಳು: XIV+೧೫೩=೧೬೭
ಬೆಲೆ:
ಅಕ್ಷರ ಸಂಯೋಜನೆ
ಮತ್ತು ಪುಸ್ತಕ ವಿನ್ಯಾಸ: ಡಾ. ಸಾವುಕಾರ ಎಸ್. ಕಾಂಬಳೆ



*

## ಕನ್ನಡವೇ ಸತ್ಯ ಕನ್ನಡವೇ ನಿತ್ಯ
## (ಕುಲಪತಿಗಳ ನುಡಿ)

ಗಡಿನಾಡಿನಲ್ಲಿ ಕನ್ನಡವನ್ನು ಮೊಳಗಿಸುವುದು; ಕನ್ನಡದ ಕೆಲಸ–ಕಾರ್ಯಗಳಿಗೆ ಪ್ರಥಮ ಪ್ರಾಶಸ್ತ್ಯವನ್ನು ನೀಡುವುದು; ಕನ್ನಡದ ಹಿರಿಮೆಯನ್ನು, ಪ್ರೌಢಿಮೆಯನ್ನು ಎತ್ತಿ ಹಿಡಿಯುವುದು–ಬಹುಭಾಷೆಗಳ ಸಂದರ್ಭದಲ್ಲಿ ಪ್ರಧಾನ ಧ್ಯೇಯ. **'ಜನವಾಣಿ ಬೇರು ಕವಿವಾಣಿ ಹೂ'** ಎಂಬ ಬಿ.ಎಂ. ಶ್ರೀಯವರ ಜನಪ್ರಿಯ ವಾಕ್ಯವನ್ನು ಇಲ್ಲಿ ಮೆಲುಕು ಹಾಕಬಹುದು. ಶ್ರೀವಿಜಯನು ನುಡಿದಂತೆ **'ಕುರಿತೋದದೆಯುಂ ಕಾವ್ಯ ಪ್ರಯೋಗ ಪರಿಣತಮತಿಗಳ್'** ಎಂಬ ಮಂತ್ರವಾಕ್ಯವನ್ನು ಜನಪದರ ಸಾಕ್ಷಿಗೆ ವಿಶ್ಲೇಷಿಸಬಹುದು.

ಕನ್ನಡ ಕಾವ್ಯ ಪಂಪನಿಂದ ಹಿಡಿದು ಕುವೆಂಪುರವರಾದಿಯಾಗಿ ಹೊಸತನಕ್ಕೆ ಆಹ್ವಾನಿಸಿಕೊಂಡ ಬಗೆ ಅದ್ಭುತವಷ್ಟೇ ಅಲ್ಲ; ಮಹೋನ್ನತಿಯ ಸ್ವರೂಪ. ಹಳಗನ್ನಡ, ನಡುಗನ್ನಡ ಹೊಸಗನ್ನಡ ನವಗನ್ನಡ ಹೀಗೆ ಭಾಷಾ ತಿರುವುಗಳಲ್ಲಿ ಹಾಯ್ದುಬಂದ ಕನ್ನಡ ಸಾಹಿತ್ಯ ದ್ರಾವಿಡ ಭಾಷೆಗಳಲ್ಲಿಯೇ ಶ್ರೀಮಂತವಾದುದು. ಈ ಕಾರಣಕ್ಕಾಗಿಯೇ ಕನ್ನಡ ಭಾಷೆಗೆ ಶಾಸ್ತ್ರೀಯ ಸ್ಥಾನಮಾನ ಲಭ್ಯವಾಗಿರುವುದು.

ಆಧುನಿಕ ಸವಾಲುಗಳ ಮಧ್ಯ ಕನ್ನಡ ಪಠ್ಯಗಳು ವಿದ್ಯಾರ್ಥಿಗಳಿಗೆ ಬಹುಮುಖಿಯ ಚಿಂತನೆಗಳನ್ನು ಹುಟ್ಟುಹಾಕಬೇಕೆನ್ನುವುದು ಇಂದಿನ ಅಗತ್ಯವಾಗಿದೆ. ಈ ಮುಖೇನ ವಿಭಿನ್ನ ಕೌಶಲ್ಯಗಳನ್ನು ಕನ್ನಡ ಸಾಹಿತ್ಯದ ಮೂಲಕ ಪ್ರಯೋಗಗಳನ್ನು ಮಂಡಿಸುವುದು ಕಾವ್ಯ ಸತ್ಯವಷ್ಟೇ ಅಲ್ಲ; ಲೊಕಸತ್ಯವೂ ಆಗಬೇಕು ಮತ್ತು ಇದು ಇಂದಿನ ತುರ್ತೂ ಹೌದು.

ಸ್ನಾತಕ ಅಭ್ಯಾಸ ಮಂಡಳಿಯ ಅಧ್ಯಕ್ಷರು, ಸದಸ್ಯರು, ಪಠ್ಯಪುಸ್ತಕಗಳ ಸಂಪಾದಕರು, ನೂತನ ಪಠ್ಯಗಳನ್ನು ಕಟ್ಟಿಕೊಡುವುದರ ಮುಖಾಂತರ ಪರಿಶ್ರಮವನ್ನು

ನೀಡಿರುವುದಿಲ್ಲಿ ವಿಶೇಷ. ಈ ಕಾರಣಕ್ಕಾಗಿ ಪ್ರಧಾನ ಸಂಪಾದಕರಾಗಿ ಹಾಗೂ ಅಭ್ಯಾಸ ಮಂಡಳಿಯ ಅಧ್ಯಕ್ಷರಾಗಿ ಕನ್ನಡ ಪಠ್ಯಗಳ ಜವಾಬ್ದಾರಿಯನ್ನು ವಹಿಸಿಕೊಂಡ ಪ್ರೊ. ಗುಂಡಣ್ಣ ಕಲಬುರ್ಗಿಯವರಿಗೆ ಹಾಗೂ ಸದಸ್ಯರಿಗೆ ವಿಶೇಷವಾಗಿ ಧನ್ಯವಾದಗಳನ್ನು ಹೇಳುತ್ತೇನೆ.

ವಿದ್ಯಾರ್ಥಿಗಳ ಶ್ರೇಯೋಭಿವೃದ್ಧಿಗಾಗಿ, ಅವರ ಭವಿಷ್ಯವನ್ನು ನಿರ್ಮಿಸುವ, ರೂಪಿಸುವ ದೃಷ್ಟಿಯನ್ನಿಟ್ಟುಕೊಂಡು ಪಠ್ಯ ಪುಸ್ತಕ ನಿರ್ಮಾಣವಾಗಬೇಕೆಂಬುದು ನನ್ನ ಅಭಿಪ್ರಾಯ. ಪಠ್ಯ ಪುಸ್ತಕಗಳನ್ನು ಸಿದ್ಧಗೊಳಿಸಿದ ಎಲ್ಲ ಸಂಪಾದಕರಿಗೂ ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ಕಾರಣರಾದ ಎಲ್ಲರಿಗೂ ಧನ್ಯವಾದಗಳನ್ನು ಅರ್ಪಿಸಿ, ಶುಭ ಹಾರೈಸುವೆ.

**– ಪ್ರೊ. ಸಿ. ಎಂ. ತ್ಯಾಗರಾಜ**
**ಕುಲಪತಿಗಳು**
**ರಾಣಿ ಚನ್ನಮ್ಮ ವಿಶ್ವವಿದ್ಯಾಲಯ, ಬೆಳಗಾವಿ.**



*

# ಕನ್ನಡವೆಂಬುದು ಬರೀ ಭಾಷೆಯಲ್ಲ...

## (ಪ್ರಧಾನ ಸಂಪಾದಕರ ನುಡಿ)

'ಕವಿರಾಜಮಾರ್ಗ'ದಿಂದ ಇಲ್ಲಿಯವರೆಗೆ ಕನ್ನಡ ಸಾಹಿತ್ಯ ಹಲವು ಮಜಲುಗಳ ಹುಟ್ಟಿಗೆ ಕಾರಣವಾಗಿ ಪ್ರಬುದ್ಧ ಎತ್ತರಕ್ಕೆ ಸಾಕ್ಷಿಯಾದದ್ದು ಚರಿತ್ರೆ. ಜಗತ್ತಿನ ಹತ್ತು ಶ್ರೇಷ್ಠ ಭಾಷೆಗಳಲ್ಲಿ ಕನ್ನಡದ ಹೆಸರೂ ನಮೂದಾಗಿರುವುದು ಸಾಮಾನ್ಯವಲ್ಲ. ಎಂಟು ಜ್ಞಾನಪೀಠ ಪುರಸ್ಕಾರಗಳನ್ನು ಪಡೆದು, ಹಲವು–ಹತ್ತು ಶ್ರೇಷ್ಠ ಗೌರವಗಳನ್ನು ಮುಡಿಗೇರಿಸಿಕೊಂಡ ಭಾಷೆ, ಸಾಹಿತ್ಯ–ಕನ್ನಡ. ಭಾಷೆಯೆಂದರೆ ಬರೀ ಭಾಷೆಯಲ್ಲ, ಕನ್ನಡ ನಾಡಿನ ಚರಿತ್ರೆ; ಸಮಗ್ರ ಬದುಕಿನ ಇತಿವೃತ್ತಿಯಾಗಿದೆ. ಜಗತ್ತಿನ ಜೀವನ ಶೈಲಿ, ಭಾರತೀಯ ಭಾಷೆಗಳ ವೈವಿಧ್ಯತೆಯ **ಅರಿವಿನ ಕೋಶ**ವನ್ನು ತನ್ನ ಉದರಕ್ಕೆ ಒತ್ತಿಕೊಂಡೇ ಕನ್ನಡ ಸಾಹಿತ್ಯ ತನ್ನ ಸೋಪಜ್ಞತೆಯ ಬೀಜಗಳನ್ನು ನಾಟಿಸುತ್ತ ಕ್ರಮಿಸಿರುವುದು.

ವಿಜ್ಞಾನ, ತಂತ್ರಜ್ಞಾನ ಎಲ್ಲ ಭೌತಿಕ–ಬೌದ್ಧಿಕ ಆವರಣವನ್ನು ತನ್ನ ಪ್ರಾಣವಾಹಿನಿಗೆ ಬಾಗೀನಗೊಳಿಸಿಕೊಂಡ ಕನ್ನಡ ಭಾಷೆ; ಸಾಹಿತ್ಯ: ಪ್ರಯೋಗಶೀಲ, ಚಲನಶೀಲ, ಕ್ರಿಯಾಶೀಲಗಳ ಮುಖಾಂತರ ಸದಾ ತನ್ನ ಜೀವಂತಿಕೆಯನ್ನು ಪ್ರಸ್ತಾಪಿಸುತ್ತಲೇ ಸಾಧನೆಯ ಕಣಜವಾಗಿ ಇನ್ನುಳಿದ ಭಾಷೆಗಳಿಗೆ ಪ್ರೇರಕ ಶಕ್ತಿಯಾಗಿರುವುದು ವಿಶೇಷ.

ಆದರೆ ಜಾಗತಿಕ ವಿದ್ಯಮಾನಗಳ ತಿರುಗುಣಿಯಲ್ಲಿ ಕನ್ನಡ ಭಾಷೆ ಹೊಸ ಸಂವೇದನೆ, ಹೊಸ ಭಾಷೆಯನ್ನು ಕಟ್ಟಿಕೊಡಬೇಕಾದ ತುರ್ತಿನಲ್ಲಿ ಅನೇಕ ಸವಾಲುಗಳನ್ನು, ಸಂಕಟಗಳನ್ನು ಎದುರಿಸಿ ಸಾಗಬೇಕಾದ ಮಾರ್ಗ ಸುಗಮವಲ್ಲ. ಕನ್ನಡ ಭಾಷೆಯ ಬೆಳವಣಿಗೆಯ ಚರಿತ್ರೆಯನ್ನು ಗಮನಿಸಿದರೆ ಪ್ರಾಕೃತ, ಸಂಸ್ಕೃತ, ಇಂಗ್ಲಿಷ್, ಹಿಂದಿ–ಇವುಗಳ ಹೇರಿಕೆಯ ಭಾರವನ್ನು ಕರಗಿಸಿಕೊಂಡು ಇಲ್ಲಿಯವರೆಗೆ ಬೆಳೆದು ನಿಂತಿರುವುದೇ ಒಂದು ಬಹುದೊಡ್ಡ ಸಾಹಸವೆನ್ನಬೇಕು. ಪ್ರಸ್ತುತ

ಸಂದರ್ಭದಲ್ಲಂತೂ ಇಂಗ್ಲಿಷ್ ಭಾಷೆಯ ಹೇರಿಕೆಯಿಂದ ಕನ್ನಡದ ಮೂಲಭೂತ ಶಿಕ್ಷಣಕ್ಕೆ ಬಹುದೊಡ್ಡ ಹೊಡೆತ ಬಿದ್ದರೂ ಕನ್ನಡ ಭಾಷೆ-ಸಾಹಿತ್ಯಕ್ಕೆ ಅದನ್ನು ಜೀರ್ಣಗೊಳಿಸಿಕೊಂಡು ಸಾಗುವ ತಾಕತ್ತು ಇದೆ.

ರಾಣಿ ಚನ್ನಮ್ಮ ವಿಶ್ವವಿದ್ಯಾಲಯವು ಗಡಿ ಪ್ರದೇಶದಲ್ಲಿ ಇರುವುದರಿಂದ ಬಹುಭಾಷೆಯ **'ಅಸ್ಮಿತೆ'**ಯನ್ನು ಉಳಿಸಿಕೊಂಡು ಕನ್ನಡ ಸಾಹಿತ್ಯ, ಭಾಷೆ, ಸಂಸ್ಕೃತಿಯೊಂದಿಗೆ **ನೆಲಧರ್ಮ**ವನ್ನು ರಕ್ಷಿಸಬೇಕಾದ ಜವಾಬ್ದಾರಿಯೂ ಹೊರತಲ್ಲ. ಭೌಗೋಳಿಕವಾಗಿ ಬೆಳಗಾವಿ, ವಿಜಯಪುರ ಜಿಲ್ಲೆಯ ವ್ಯಾಪ್ತಿಯು ಪ್ರಸ್ತುತ ವಿಶ್ವವಿದ್ಯಾಲಯಕ್ಕೆ ಸಂಬಂಧಿಸಿರುತ್ತದೆ. ಬಾಗಲಕೋಟೆ ಜಿಲ್ಲೆಯ ಶೈಕ್ಷಣಿಕ ವ್ಯಾಪ್ತಿ ಪ್ರಸ್ತುತ ವರ್ಷದಲ್ಲಿ ಪ್ರತ್ಯೇಕಗೊಂಡಿದ್ದು ಅಧ್ಯಾಹಾರ.

ವಿಭಿನ್ನ ಕನಸು-ಪ್ರಯೋಗಳನ್ನು ಮುಂದಿಟ್ಟು ಮುನ್ನುಗ್ಗುವ ಇರಾದೆಯನ್ನು ಹೊತ್ತುಕೊಂಡ ರಾಣಿ ಚನ್ನಮ್ಮ ವಿಶ್ವವಿದ್ಯಾಲಯವು ಬೇರೆ ವಿಶ್ವವಿದ್ಯಾಲಯಗಳಿಗಿಂತ ಭಿನ್ನತೆಯನ್ನು ಬಯಸುತ್ತದೆ. ಈ ನಿಟ್ಟಿನಲ್ಲಿ ಕನ್ನಡ ಅಧ್ಯಯನ ವಿಭಾಗವು ಸ್ನಾತಕ ಪಠ್ಯಗಳನ್ನು ರಚಿಸುವ ಜವಾಬ್ದಾರಿಯನ್ನು ಹೊತ್ತುಕೊಂಡಿದೆ. ಪ್ರಸ್ತುತ ಸಂದರ್ಭಕ್ಕೆ, ಶೈಕ್ಷಣಿಕ ಅಗತ್ಯಗಳಿಗೆ ಪೂರಕವಾಗುವ ಪಠ್ಯಗಳನ್ನು ರಚಿಸುವುದು ಅಷ್ಟು ಸರಳವಲ್ಲ. ಹಳತು-ಹೊಸತುಗಳ ಪರಿಕಲ್ಪನೆ ಸಾಕಾರಗೊಳ್ಳುವ ಬಗೆಯಲ್ಲಿ ಯೋಚಿಸಬೇಕಾಗುತ್ತದೆ. ಪಠ್ಯಕ್ರಮದ ಮಾದರಿಯನ್ನು ಹೊಸ ಕಾಲದ ಅವಶ್ಯಕತೆಗಳಿಗೆ ಅನುಗುಣವಾಗಿ ಒಪ್ಪಿಸುವುದು ಇಲ್ಲಿ ಮುಖ್ಯ. ಪ್ರಸ್ತುತ ಸನ್ನಿವೇಶದ ಅನೇಕ ತುರ್ತುಗಳನ್ನು ಪೂರೈಸುವ ಕಾರ್ಯ ಈ ಪಠ್ಯಗಳು ಮಾಡುತ್ತವೆ. ಭಾಷಾ ಬೋಧನೆಯ ಸಂದರ್ಭದಲ್ಲಿ ಕನ್ನಡ ಭಾಷೆ ಮತ್ತು ಸಾಹಿತ್ಯದ ಬಗೆಗಿನ ಆಸಕ್ತಿಯು ಅನೇಕ ನೆಲೆಗಳಲ್ಲಿ ಜರುಗಬೇಕಾಗಿದೆ. ಕನ್ನಡವನ್ನು ಜ್ಞಾನದ ಭಾಷೆಯನ್ನಾಗಿ, ಅಭಿವ್ಯಕ್ತಿಗೊಳ್ಳುವ ಸಶಕ್ತ ಸಾಧನವಾಗಿ ವಿದ್ಯಾರ್ಥಿಗಳು ಕಲಿಯಬೇಕಾಗಿದೆ.

ಕುತೂಹಲ ಹುಟ್ಟಿಸುವ ವರ್ತಮಾನ ಕಾಲದ ಅನೇಕ ಬಿಕ್ಕಟ್ಟುಗಳನ್ನು ವಸ್ತುಗಳಾಗಿ (ಥೀಮ್) ಗಮನಿಸುವ ಬಗೆಯೂ ಇದರಲ್ಲಿ ಮೂಲ ಉದ್ದೇಶವಾಗಬೇಕು. ಸಾಹಿತ್ಯವನ್ನು ಈ ಹಿನ್ನೆಲೆಯಲ್ಲಿ ಅರ್ಥೈಸುವುದರಿಂದ ವಿದ್ಯಾರ್ಥಿಗಳು ಗ್ರಹಿಕೆ, ಅಭಿವ್ಯಕ್ತಿ ಹಾಗೂ ಜ್ಞಾನದ ದೃಷ್ಟಿಯಲ್ಲಿ ಹೆಚ್ಚು ಪ್ರಸ್ತುತವಾಗುತ್ತಾರೆ. ಕನ್ನಡವು ನೈಜ ಅರ್ಥದಲ್ಲಿ ಅವರಿಗೆ ತೀರ ಹತ್ತಿರವಾಗುತ್ತದೆ.

ಹೊಸ ಪಠ್ಯಕ್ರಮವು-ವಿದ್ಯಾರ್ಥಿಗಳು ಮೂಲ ಪಠ್ಯಗಳನ್ನು ಓದಬೇಕಾದ ಅಗತ್ಯವನ್ನು ಒದಗಿಸುತ್ತದೆ ಮತ್ತು ಪರಸ್ಪರ ಭಿನ್ನ ಪಠ್ಯಗಳಲ್ಲಿ ತೆರೆದುಕೊಳ್ಳುವ



ವಿಭಿನ್ನ ಆಲೋಚನೆಗಳನ್ನು ಗ್ರಹಿಸುವುದರ ಮುಖೇನ ಜ್ಞಾನದ ದೀವಿಗೆಯನ್ನು ವಿಸ್ತರಿಸುತ್ತದೆ. ಈ ಮೂಲಕ ಅವರಲ್ಲಿ ಸ್ವಕೀಯ ಕೌಶಲ್ಯಗಳು ಉದ್ದೀಪನಗೊಳುತ್ತವೆ. ಚರ್ಚೆ, ಸಂವಾದ, ವಿಶ್ಲೇಷಣೆ ಮುಂತಾದ ಕೌಶಲ್ಯಗಳಲ್ಲಿ ವಿದ್ಯಾರ್ಥಿಗಳನ್ನು ಕರೆದೊಯ್ಯಬೇಕಾಗಿರುವುದು ನಮ್ಮ ಆದ್ಯಕರ್ತವ್ಯಗಳಲ್ಲಿ ಒಂದು.

ಸನ್ಮಾನ್ಯ ಕುಲಪತಿಗಳಾದ ಪ್ರೊ. ಸಿ.ಎಂ. ತ್ಯಾಗರಾಜ ಅವರು ಬಹುಮುಖ ಪ್ರತಿಭೆಯ ಕುಲಪತಿಗಳು. ಕನ್ನಡ ಸಾಹಿತ್ಯ, ಭಾಷೆಯ ಬಗ್ಗೆ ತುಂಬಾ ಪ್ರೀತಿ-ಕಾಳಜಿಯನ್ನು ಹೊಂದಿದವರು. ಯಾವತ್ತೂ ನವೀನವಾದುದನ್ನು ಅಪೇಕ್ಷಿಸುವ ಇವರು ಸಾಹಿತ್ಯದ ಗಂಭೀರ ಓದುಗರೆಂದು ಬಹಳ ಜನರಿಗೆ ಗೊತ್ತಿಲ್ಲ. ಅದರಲ್ಲೂ ಕನ್ನಡ ಅಧ್ಯಯನ ವಿಭಾಗದ ಬಗ್ಗೆ ಅವರಿಟ್ಟ ಪ್ರೀತಿ, ಗೌರವ ಅಪಾರ. ಈ ಮೂಲಕ ಅವರಿಗೆ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ಕುಲಸಚಿವರಾದ ಶ್ರೀ ಸಂತೋಷ ಕಾಮಗೌಡ, ಕೆ.ಎ.ಎಸ್. ಹಿರಿಯ ಶ್ರೇಣಿ ಅವರಿಗೂ ಮೌಲ್ಯಮಾಪನ ಕುಲಸಚಿವರಾದ ಪ್ರೊ. ರವೀಂದ್ರನಾಥ ಎನ್. ಕದಮ್ ಅವರಿಗೂ ಹಣಕಾಸು ಅಧಿಕಾರಿಗಳಾದ ಶ್ರೀಮತಿ ಎಂ.ಎ. ಸಪ್ನ ಅವರಿಗೂ ಪ್ರಸಾರಾಂಗದ ಪ್ರಭಾರಿ ನಿರ್ದೇಶಕರಾದ ಡಾ. ಪೂಜಾ ಹಲ್ಯಾಳ ಅವರಿಗೂ ಸಹಾಯಕ ನಿರ್ದೇಶಕರಾದ ಡಾ. ಸಚಿಂದ್ರ ಜಿ. ಆರ್. ಅವರಿಗೂ ಈ ಸಂದರ್ಭದಲ್ಲಿ ಧನ್ಯವಾದಗಳನ್ನು ಅರ್ಪಿಸುತ್ತೇನೆ.

ಅಭ್ಯಾಸ ಮಂಡಳಿಯ ಸದಸ್ಯರಾದ ಡಾ.ಎಚ್.ಬಿ. ಕೋಲ್ಕಾರ, ಡಾ. ಎಚ್.ಪಿ. ಹಾಲೊಳ್ಳಿ ಅವರಿಗೆ, ಸಕಾಲಕ್ಕೆ ಸಂಪಾದನೆಯ ಕಾರ್ಯವನ್ನು ಪೂರೈಸಿಕೊಟ್ಟ ಪ್ರಸ್ತುತ ಪಠ್ಯದ ಸಂಪಾದಕರಾದ ಶ್ರೀ ರಾಮರೆಡ್ಡಿ ಕೆ., ಡಾ. ರಾಜಶೇಖರ ಬಿರಾದಾರ ಅವರಿಗೆ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

**- ಪ್ರೊ. ಗುಂಡಣ್ಣ ಕಲಬುರ್ಗಿ**
**ಮುಖ್ಯಸ್ಥರು,**
**ಶಾಸ್ತ್ರೀಯ ಕನ್ನಡ ಭಾಷಾ ಅಧ್ಯಯನ ಸಂಸ್ಥೆ,**
**ಹಾಗೂ ಅಧ್ಯಕ್ಷರು, ಸ್ನಾತಕ ಅಭ್ಯಾಸ ಮಂಡಳಿ**
**ರಾಣಿ ಚನ್ನಮ್ಮ ವಿಶ್ವವಿದ್ಯಾಲಯ, ಬೆಳಗಾವಿ.**

*

# ಸಂಪಾದಕೀಯ

ಜಾಗತೀಕರಣೋತ್ತರದ ಈ ಸಂದರ್ಭದಲ್ಲಿ ಪಾರಂಪರಿಕೆಯ ತಿಳುವಳಿಕೆಗಳು ಪರಿವರ್ತನೆಯ ತಿರುವಿಗೆ ಸರಿಯುತ್ತಿರುವುದು ಸರ್ವವಿದಿತ. ಇವುಗಳು ಆಶ್ಚರ್ಯವನ್ನುಂಟು ಮಾಡುವುದರ ಜೊತೆಗೆ ಜ್ಞಾನ ಶಾಖೆಗಳ ವಿವೇಕಪೂರ್ಣ ಬಳಕೆಗೆ ನಮ್ಮನ್ನು ಒತ್ತಾಯಿಸುತ್ತಿವೆ. ಇವುಗಳ ತಿಳುವಳಿಕೆಗೆ ಪೂರಕವಾಗಿ ಕೌಶಲ್ಯಯುತ ಜ್ಞಾನವನ್ನು ನೀಡುವುದು, ಪ್ರಸಾರ ಮಾಡುವುದು ಪದವಿ ಶಿಕ್ಷಣದ ಮೊದಲ ಆದ್ಯತೆಯಾಗಬೇಕಾಗಿದೆ.

ಕನ್ನಡ ಸಾಹಿತ್ಯ ಕಾಲದಿಂದ ಕಾಲಕ್ಕೆ ಬದಲಾಗುತ್ತಾ ಹೊಸ ಹೊಸ ಅನ್ವೇಷಣೆ, ಆವಿಷ್ಕಾರಗಳಲ್ಲಿ ಹೊಸ ಹೊಸ ರೂಪ ಪಡೆಯುತ್ತ ಶ್ರೀಮಂತವಾಗುತ್ತ ಸಾಗುತ್ತಿರುವುದು ಆಧುನಿಕ ಯುಗದಲ್ಲಿ ಗಮನಾರ್ಹ. ಪ್ರಾಚೀನ ಸಾಹಿತ್ಯ ಕೇವಲ ಪದ್ಯರೂಪಕ್ಕೆ ಮಾತ್ರ ಸೀಮಿತವಾಗಿದ್ದರೆ, ಆಧುನಿಕ ಸಾಹಿತ್ಯ ಪಾಶ್ಚಾತ್ಯ ಸಾಹಿತ್ಯದ ಪ್ರಭಾವದಿಂದ ಮತ್ತು ದೇಶೀ ಮೂಲದ ಜೀವ ದ್ರವ್ಯದ ಜೊತೆ ಬೆರೆತು ಭಾವಗೀತೆ, ನವ್ಯಕಾವ್ಯ, ಕತೆ, ಕಾದಂಬರಿ, ಪ್ರಬಂಧ, ನಾಟಕ, ವಿಮರ್ಶೆ, ಚುಟುಕು ಸಾಹಿತ್ಯ, ಅಂಕಣ ಬರಹ, ಪತ್ರಿಕಾ ಬರಹ ಹೀಗೆ ಅನಂತಮುಖವಾಗಿ ಬೆಳೆದು ಬಂದಿತು.

ಕರ್ನಾಟಕದಲ್ಲಿ ಕನ್ನಡವು ಕನ್ನಡಿಗರ ಮನೆ ಭಾಷೆ. ಇದು ಅನ್ನದ ಭಾಷೆಯಾಗುವುದರ ಜೊತೆಗೆ, ಆಡಳಿತ, ವ್ಯವಹಾರ, ಶಿಕ್ಷಣದ ಮಾಧ್ಯಮದ ಭಾಷೆಯಾಗಿ ಜೀವನದ ಎಲ್ಲ ಆಯಾಮಗಳಲ್ಲಿ ಚಾಚಬೇಕಾಗಿರುವುದು ಇಂದಿನ ಅನಿವಾರ್ಯತೆಯಾಗಿದೆ. ಜಾಗತೀಕರಣ, ಗಣಕೀಕರಣ, ವಿಜ್ಞಾನ-ತಂತ್ರಜ್ಞಾನಗಳ ವಲಯ ಹೆಚ್ಚಾಗುತ್ತಿರುವ ಈ ಸಂದರ್ಭದಲ್ಲಿ ಪ್ರಾದೇಶಿಕ ಭಾಷೆಯಾದ ಕನ್ನಡವನ್ನು ಅದರ ಶಕ್ತಿ-ಸಾಮರ್ಥ್ಯವನ್ನು ಉಳಿಸುವುದು, ಬೆಳೆಸುವುದು, ಗಟ್ಟಿಗೊಳಿಸುವುದು ನಮ್ಮೆಲ್ಲರ ಕರ್ತವ್ಯವಾಗಿದೆ.

ಪ್ರಸ್ತುತ ವಿದ್ಯಾರ್ಥಿಗಳ ವಯೋಮಾನ, ಅವರ ಬೌದ್ಧಿಕ ಸಾಮರ್ಥ್ಯದ ಇತಿಮಿತಿಗಳ ಹಿನ್ನೆಲೆಯಲ್ಲಿ ಪಠ್ಯ ಸಿದ್ಧಗೊಂಡಿದೆ. ಪ್ರಜ್ಞಾವಂತ ಅಧ್ಯಾಪಕ ವರ್ಗ

ಇಂದಿನ ಸಾಂಸ್ಕೃತಿಕ ಸಂದರ್ಭದ ಅರಿವಿನೊಂದಿಗೆ ವಿದ್ಯಾರ್ಥಿಗಳಿಗೆ ಪರಿಣಾಮಕಾರಿಯಾಗಿ ಬೋಧಿಸಿದ್ದಾದರೆ ಇಲ್ಲಿನ ಪಠ್ಯಗಳು ಸಾರ್ಥಕತೆಯನ್ನು ಪಡೆದುಕೊಳ್ಳುತ್ತವೆ.

'ಸಾಹಿತ್ಯವು ಸಮಾಜದ ಪ್ರತಿಬಿಂಬ ಮತ್ತು ಗತಿಬಿಂಬ' ಎಂಬ ರಾಷ್ಟ್ರಕವಿ ಜಿ.ಎಸ್. ಶಿವರುದ್ರಪ್ಪ ಅವರ ಮಾತಿನಂತೆ, ಸಮಕಾಲೀನ ಸಮಾಜದ ಆಚಾರ–ವಿಚಾರ, ನಡೆ–ನುಡಿ, ನೀತಿ–ನಿಯಮಗಳು ಆಯಾಕಾಲದಲ್ಲಿ ಅಭಿವ್ಯಕ್ತವಾಗುವ ಸಾಹಿತ್ಯದಲ್ಲಿ ಪ್ರತಿಬಿಂಬಿತವಾಗಿರುತ್ತವೆ. ಆಧುನಿಕ ಧಾವಂತದ ಬದುಕಿನ ವೇಗದ ಓಟದಲ್ಲಿ ನಮ್ಮ ಪಾರಂಪರಿಕ ಮೌಲ್ಯಗಳನ್ನು ಹಿಂದಿರುಗಿ ನೋಡಲು ಪುರುಸೊತ್ತಿಲ್ಲದಾಗಿದೆ. ಇಂತಹ ಸಂದಿಗ್ಧ ಪರಿಸ್ಥಿತಿಯಲ್ಲಿ ಸಾಹಿತ್ಯವೊಂದೇ ನಮ್ಮನ್ನು ಸರಿದಾರಿಯಲ್ಲಿ ನಡೆಸುವ ಕೈದೀವಿಗೆಯಾಗಿದೆ. ಅದರಲ್ಲೂ ಕ್ಷುಲ್ಲಕ ಕಾರಣಗಳಿಗಾಗಿ ನಮ್ಮ ಯುವಜನತೆಯಲ್ಲಿ ನಾಡು–ನುಡಿಯ ಬಗೆಗಿನ ಅಭಿಮಾನ ಕಡಿಮೆಯಾಗುತ್ತಿದೆ. ಅತ್ಯಾಧುನಿಕ ತಂತ್ರಜ್ಞಾನ ಯುಗದಲ್ಲಿಯೂ ವಿಚಾರಹೀನತೆಯು ಎದ್ದು ಕಾಣುತ್ತಿದೆ. ವಿದ್ಯಾರ್ಥಿಗಳ ಸ್ವಾಭಿಮಾನ, ಕನ್ನಡ ನಾಡು–ನುಡಿಯ ಪ್ರಜ್ಞೆಯನ್ನು ಜಾಗೃತಗೊಳಿಸುವ, ವೈಚಾರಿಕತೆಯನ್ನು ಪ್ರಚೋದಿಸುವ ಪಠ್ಯಗಳನ್ನು ನಿಗದಿಪಡಿಸಲಾಗಿದೆ. ಹಾಸ್ಯವೆಂದರೆ ಇನ್ನೊಬ್ಬರನ್ನು ಅಪಹಾಸ್ಯ ಮಾಡುವ, ಇನ್ನೊಬ್ಬರನ್ನು ನೋಡಿ ನಗುವುದಾಗಿರುವ ಸಂದರ್ಭದಲ್ಲಿ ನವಿರು ಹಾಸ್ಯ ಪ್ರಜ್ಞೆಯ ಪಠ್ಯಗಳನ್ನೂ ಸೇರಿಸಲಾಗಿದೆ.

ನಮ್ಮ ಮೇಲೆ ಭರವಸೆಯಿಟ್ಟು, ಬಿ.ಎ. ಪದವಿಯ ಒಂದನೆಯ ಸೆಮಿಸ್ಟರ್‌ನ ಕಡ್ಡಾಯ ಕನ್ನಡ ಪಠ್ಯಪುಸ್ತಕವನ್ನು ಸಂಪಾದಿಸುವ ಗುರುತರ ಜವಾಬ್ದಾರಿಯನ್ನು ವಹಿಸಿದ ಕುಲಪತಿಗಳಾದ ಪ್ರೊ. ಸಿ.ಎಂ. ತ್ಯಾಗರಾಜ ಅವರಿಗೆ, ಆಡಳಿತ ವಿಭಾಗದ ಕುಲಸಚಿವರಾದ ಶ್ರೀ ಸಂತೋಷ ಕಾಮಗೌಡ, ಕೆ.ಎ.ಎಸ್. ಹಿರಿಯ ಶ್ರೇಣಿ ಅವರಿಗೆ, ಮೌಲ್ಯಮಾಪನ ವಿಭಾಗದ ಕುಲಸಚಿವರಾದ ಪ್ರೊ. ರವೀಂದ್ರನಾಥ ಕದಮ್ ಅವರಿಗೆ, ಹಣಕಾಸು ಅಧಿಕಾರಿಗಳಾದ ಶ್ರೀಮತಿ ಎಂ.ಎ. ಸಪ್ನ ಅವರಿಗೆ, ಪ್ರಸಾರಾಂಗದ ಪ್ರಭಾರಿ ನಿರ್ದೇಶಕರಾದ ಡಾ. ಪೂಜಾ ಹಲ್ಯಾಳ ಅವರಿಗೆ, ಸಹಾಯಕ ನಿರ್ದೇಶಕರಾದ ಡಾ. ಸಚಿಂದ್ರ ಜಿ. ಆರ್. ಅವರಿಗೂ ಕನ್ನಡ ಅಭ್ಯಾಸ ಮಂಡಳಿಯ ಅಧ್ಯಕ್ಷರಾದ ಪ್ರೊ. ಗುಂಡಣ್ಣ ಕಲಬುರ್ಗಿಯವರಿಗೆ, ಸದಸ್ಯರುಗಳಾದ ಡಾ. ಎಚ್.ಬಿ. ಕೋಲ್ಕಾರ ಹಾಗೂ ಡಾ.ಎಚ್.ಪಿ. ಹಾಲೊಳ್ಳಿಯವರಿಗೆ ತುಂಬು ಹೃದಯದ ಕೃತಜ್ಞತೆಗಳನ್ನು ಸಲ್ಲಿಸುತ್ತೇವೆ.

**ರಾಮರೆಡ್ಡಿ ಕೆ.**
**ಡಾ. ರಾಜಶೇಖರ ಬಿರಾದಾರ**



*

# ಪರಿವಿಡಿ

**"ಕರ್ನಾಟಕವೆಂಬುದೇನು, ಹೆಸರೆ ಬರಿಯ ಮಣ್ಣಿಗೆ....."**

(ಕುವೆಂಪು, ಇಕ್ಷುಗಂಗೋತ್ರಿ)

ಬಂಜಗೆರೆ ಜಯಪ್ರಕಾಶ ಅವರು ಕುವೆಂಪು ಅವರ ಪದ್ಯವನ್ನು ಉಲ್ಲೇಖಿಸಿ ಹೇಳುವಂತೆ "ಕರ್ನಾಟಕವನ್ನು ನಮ್ಮ ನೆಲೆಯಾಗಿ, ಕನ್ನಡತನದ ಪೋಷಕ ಶಕ್ತಿಯಾಗಿ, ಆರಾಧ್ಯ ದೇವತೆಯಾಗಿ, ಕಾಯುವ ಹಾಗೂ ಶಿಕ್ಷಿಸುವ ಶಕ್ತಿಯಾಗಿ, ಮೈನವಿರೇಳಿಸುವ ಮಂತ್ರವಾಗಿ ಕುವೆಂಪು ಅವರು ಗುರುತಿಸುತ್ತಾ, ಒಂದು ಜನ ಸಮುದಾಯದ ಬಾಳಿನಲ್ಲಿ ಅದು ನಿರ್ವಹಿಸುವ ಹಲವು ಬಗೆಯ ಪಾತ್ರಗಳನ್ನು ಬಹಳ ಅರ್ಥಪೂರ್ಣವಾಗಿ ಅಭಿವ್ಯಕ್ತಿಸಿದ್ದಾರೆ. ಕರ್ನಾಟಕವು ನಮ್ಮೆಲ್ಲರ ಹೆತ್ತೊಡಲಾಗಿರುವದರಿಂದಲೇ ನಾವೆಲ್ಲರೂ ಸೋದರರು ಎಂಬ ಒಂದು ಸಮಾನ ಭಾವನೆಯಲ್ಲಿ ಪರಸ್ಪರ ಸಂಬಂಧಿತರಾಗಿದ್ದೇವೆ."

ಕನ್ನಡ ನಾಡು ಚೆನ್ನ, ಕನ್ನಡ ನುಡಿ ಚೆನ್ನ, ಚೆಲ್ವಾದುದು ಕನ್ನಡಮೆನಿಪ್ಪಾ ನಮ್ಮ ನುಡಿ ಚೆಲುವ ಕನ್ನಡವನ್ನು ಆ ತಾಯಿ ಮಕ್ಕಳಾದ ನಾವೇ ಉಳಿಸಬೇಕು ಬೆಳೆಸಬೇಕು. ಬೇರೆ ಭಾಷೆಗಳನ್ನು ಗೌರವಿಸಬೇಕು ಹಾಗೂ ನಮ್ಮ ಭಾಷೆಯನ್ನು ಉಳಿಸುತ್ತಾ ನಮ್ಮನ್ನು ನಾವು ಸಾಂಸ್ಕೃತಿಕವಾಗಿ, ಶೈಕ್ಷಣಿಕವಾಗಿ, ತಾಂತ್ರಿಕವಾಗಿ, ಸಾಹಿತ್ಯಿಕವಾಗಿ, ಆಡಳಿತಾತ್ಮಕವಾಗಿ ಕನ್ನಡ ನಾಡು ನುಡಿ ಉಳಿವಿಗಾಗಿ ಕಂಕಣ ಬದ್ಧರಾಗಿ ತೊಡಗಿಸಿಕೊಳ್ಳಬೇಕು. ಆಗ ಮಾತ್ರ ಕನ್ನಡ–ಕರ್ನಾಟಕ ಉಳಿಯಲು ಸಾಧ್ಯ.



# ೧. ಕನ್ನಡಿಗರ ಗುಣಸ್ವಭಾವ

❖

**ಶ್ರೀವಿಜಯ**

ಕಾವೇರಿಯಿಂದಮಾ ಗೋ
ದಾವರಿವರಮಿರ್ಪ ನಾಡದಾ ಕನ್ನಡದೊಳ್
ಭಾವಿಸಿದ ಜನಪದಂ ವಸು
ಧಾವಳಯವಿಲೀನವಿಶದ ವಿಷಯ ವಿಶೇಷಂ ॥೧॥

ಅದಱೊಳಗಂ ಕಿಸುವೊೞಲಾ
ವಿದಿತ ಮಹಾಕೊಪಣ ನಗರದಾ ಪುಲಿಗೆಱೆಯಾ
ಸದಭಿಸ್ತುತಮಪ್ಪೊಕ್ಕುಂ
ದದ ನಡುವಣ ನಾಡೆ ನಾಡೆ ಕನ್ನಡದ ತಿರುಳ್ ॥೨॥

ಪದನಱಿದು ನುಡಿಯಲುಂ ನುಡಿ
ದುದನಱಿದಾರಯಲುಮಾರ್ಪರಾ ನಾಡವರ್ಗಳ್
ಚದುರರ್ ನಿಜದಿಂ ಕುಱಿತೋ
ದದೆಯುಂ ಕಾವ್ಯಪ್ರಯೋಗ ಪರಿಣತಮತಿಗಳ್ ॥೩॥

ಕುಱಿತವರಲ್ಲದೆ ಮತ್ತಂ
ಪೆಱರುಂ ತಂತಮ್ಮ ನುಡಿಯೊಳೆಲ್ಲರ್ ಜಾಣರ್
ಕಿಱಿವಕ್ಕಳುಮಾ ಮೂಗರು
ಮಱಿಪಲ್ಕಱಿವರ್ ವಿವೇಕಮಂ ಮಾತುಗಳಂ ॥೪॥

ಜಾಣರ್ಕಳಲ್ಲದವರುಂ
ಪೂಣಿಗರಱಿಯದೆಯುಮಱಿವವೋಲವಗುಣದಾ
ತಾಣಮನಿನಿಸಡೆವೆತ್ತೊಡೆ
ಮಾಣದೆ ಪಿಡಿದದನೆ ಕೃತಿಗಳಂ ಕೆಡೆನುಡಿವರ್ ॥೫॥

ಸಕ್ಕದಮುಂ ಪಾಗದಮುಮ
ದಕ್ಕುಂ ಬಗೆದಂತೆ ಸಮಱಿ ಪೇೞಲ್ ಮುನ್ನಂ
ನಿಕ್ಕುವಮೊಳವಪ್ಪುದಱಿಂ
ತಕ್ಕಂತವಱವಱಿ ಲಕ್ಷ್ಯಮುಂ ಲಕ್ಷ್ಯಣಮುಂ ॥೬॥

ಅರಿದಾದಂ ಕನ್ನಡದೊ
ಳ್ತಿರಿಕೊೞ್ಗೊಂಡಱಿಯೆ ಪೇೞ್ವೆನೆಂಬುದಿದಾರ್ಗಂ
ಪರಮಾಚಾರ್ಯರವೋಲ್ ಸೈ
ತಿರಲಱಿಯರ್ ಕನ್ನಡಕ್ಕೆ ನಾಡವರೋಜರ್ ॥೭॥

ಸುಭಟರ್ಕಳ್ ಕವಿಗಳ್ ಸು
ಪ್ರಭುಗಳ್ ಚೆಲ್ವರ್ಕಳಭಿಜನರ್ಕಳ್ ಗುಣಿಗಳ್
ಅಭಿಮಾನಿಗಳತ್ಯುಗ್ರರ್
ಗಭೀರಚಿತ್ತರ್ ವಿವೇಕಿಗಳ್ ನಾಡವರ್ಗಳ್ ॥೮॥

ಪಾಪಮಿದು ಪುಣ್ಯಮಿದು ಹಿತ
ರೂಪಮಿದಹಿತಪ್ರಕಾರಮಿದು ಸುಖಮಿದು ದುಃ
ಖೋಪಾತ್ತಮಿದೆಂದಱಿಪುಗು
ಮಾ ಪರಮ ಕವಿ ಪ್ರಧಾನರಾ ಕಾವ್ಯಂಗಳ್ ॥೯॥

ನೆನೆನೆನೆದು ಪೆಱರ ಮಾತುಗ
ಳನೆ ನೆಗೞ್ದಿರೆ ಕೃತಿಯೊಳಿಡುವವಂ ನಗದ ಗುಹಾ
ಧ್ವನಿಯವೊಲನರ್ಥವಚನಂ
ತನಗಾಗಿ ಸಲಱಿಯನುಚಿತ ವಾಕ್ಚತುರತೆಯಂ ॥೧೦॥



ಕುಱುತಂತು ಪೆಱರ ಬಗೆಯಂ
ತೆಱೆದಿರೆ ಪೆಱರ್ಗಱಿಪಲಾರ್ಪವಂ ಮಾತಱಿವಂ
ಕಿಱಿದಱೊಳೆ ಪಿರಿದರ್ಥಮ
ನೆಱಪಲ್ ನೆಱೆವಾತನಾನಿಂದಂ ಜಾಣಂ ॥೧೧॥

ನುಡಿಯಂ ಛಂದದೊಳೊಂದಿರೆ
ತೊಡರ್ಚಲಱಿವಾತನಾತನಿಂದಂ ಜಾಣಂ
ತಡೆಯದೆ ಮಹಾಧ್ವಕೃತಿಗಳ
ನೊಡರಿಸಲಾರ್ಪಾತನೆಲ್ಲರಿಂದಂ ಬಲ್ಲಂ ॥೧೨॥

ಮಾತಱಿವರ್ ಕೆಲಬರ್ ಜಗ
ತೀತಳಗತ ಮನುಜರೊಳಗೆ ಮಾತಱಿವವರೊಳ್
ನೀತಿವಿದರಮಳ ಕವಿತಾ
ನೀತಿಯುತರ್ ಕೆಲರೆ ಪರಮಕವಿ ವೃಷಭರ್ಕಳ್ ॥೧೩॥

* * *

**ಕವಿ ಪರಿಚಯ :**

ರಾಷ್ಟ್ರಕೂಟ ಅರಸ ಅಮೋಘವರ್ಷ ನೃಪತುಂಗನ ಆಸ್ಥಾನ ಕವಿಯಾಗಿದ್ದ ಶ್ರೀವಿಜಯನ (೮೧೪–೮೭೭) 'ಕವಿರಾಜಮಾರ್ಗ' ಕೃತಿಯು ಇದುವರೆಗೆ ದೊರೆತಿರುವ ಕನ್ನಡ ಕೃತಿಗಳಲ್ಲಿ ಮೊದಲನೆಯದು. ಸಂಸ್ಕೃತ ಲಾಕ್ಷಣಿಕ ದಂಡಿಯ 'ಕಾವ್ಯಾದರ್ಶ'ವನ್ನು ಆಕರವಾಗಿಟ್ಟುಕೊಂಡು ರಚಿತವಾದ ಕನ್ನಡದ ಮೊದಲ ಲಕ್ಷಣ ಗ್ರಂಥವಾಗಿದೆ. ಈ ಕೃತಿಯಲ್ಲಿ 'ದೋಷಾನುದೋಷವರ್ಣನ', 'ಶಬ್ದಾಲಂಕಾರವರ್ಣನ ನಿರ್ಣಯ', ಮತ್ತು 'ಅರ್ಥಾಲಂಕಾರವರ್ಣನ ನಿರ್ಣಯ' ಎಂಬ ಮೂರು ಪರಿಚ್ಛೇದಗಳಿವೆ. ಮೊದಲನೆಯ ಅಧ್ಯಾಯದಲ್ಲಿ ಕಾವ್ಯದೋಷ, ಕನ್ನಡ ನಾಡಿನ ವಿಸ್ತಾರ, ಕನ್ನಡಿಗರ ಗುಣಸ್ವಭಾವ ಚಿತ್ರಣ, ನಾಡು–ನುಡಿ, ಸಾಹಿತ್ಯ–ಸಂಸ್ಕೃತಿಯ ಚಿಂತನೆಗಳಿವೆ. ಎರಡನೆಯ ಅಧ್ಯಾಯದಲ್ಲಿ ಶಬ್ದಾಲಂಕಾರಗಳ ವಿವರವಿದ್ದರೆ, ಮೂರನೆಯ ಅಧ್ಯಾಯದಲ್ಲಿ ಅರ್ಥಾಲಂಕಾರಗಳನ್ನು ನಿರೂಪಿಸಲಾಗಿದೆ. ಪ್ರಸ್ತುತ ಪಠ್ಯವನ್ನು ವಿ. ಸೀತಾರಾಮಯ್ಯನವರು ಸಂಪಾದಿಸಿರುವ 'ಕವಿರಾಜಮಾರ್ಗಂ' ಎಂಬ ಕೃತಿಯಿಂದ ಆಯ್ದುಕೊಳ್ಳಲಾಗಿದೆ.

**ಕಾವ್ಯದ ಆಶಯ :**

ಶ್ರೀವಿಜಯನ ಕಾಲದ ಕರುನಾಡು ದಕ್ಷಿಣದ ಕಾವೇರಿಯಿಂದ ಉತ್ತರದ ಗೋದಾವರಿಯವರೆಗೆ ವ್ಯಾಪಿಸಿತ್ತು. ಅದರಲ್ಲಿ ಪಟ್ಟದಕಲ್ಲು, ಕೊಪ್ಪಳ, ಲಕ್ಷ್ಮೇಶ್ವರ ಮತ್ತು ಒಕ್ಕುಂದ – ಈ ನಾಲ್ಕು ಊರುಗಳ ನಡುವಣ ನಾಡು 'ಅಚ್ಚಗನ್ನಡ' ಪ್ರದೇಶವಾಗಿತ್ತು. ಈ ನಾಡಿನ ಜನರು ಮಾತನ್ನು ಅರಿತು ಆಡುತ್ತಿದ್ದರು, ಇತರರ ಮಾತುಗಳನ್ನು ಸರಿಯಾಗಿ ಅರ್ಥಮಾಡಿಕೊಳ್ಳುತ್ತಿದ್ದರು. ಅವರು ವಿದ್ಯಾಭ್ಯಾಸ ಮಾಡದಿದ್ದರೂ ಕಾವ್ಯ ರಚನೆಯಲ್ಲಿ ಪರಿಣತಿಯನ್ನು ಗಳಿಸಿದ್ದರು. ಓದಿದವರು ಮಾತ್ರವಲ್ಲದೆ ನಾಡಿನ ಎಲ್ಲ ಜನರೂ ತಮ್ಮ ತಮ್ಮ ಮಾತಿನಲ್ಲಿ ಜಾಣರಾಗಿದ್ದರು. ಸಣ್ಣ ಮಕ್ಕಳು, ಮೂಕರೂ ಕೂಡ ವಿವೇಕದ ಮಾತುಗಳನ್ನು ಅರ್ಥೈಸಿಕೊಳ್ಳುವ ಸಾಮರ್ಥ್ಯ ಹೊಂದಿದ್ದರು. ಅವರ ಮಾತು, ಕೃತಿಗಳು ಪಾಪ–ಪುಣ್ಯ, ಹಿತ–ಅಹಿತ, ಸುಖ–ದುಃಖಗಳನ್ನು ನಿರ್ಣಯಿಸುವ ನೀತಿಬೋಧಕಗಳಾಗಿದ್ದವು. ಅವರು ಮಾತರಿತ ಜಾಣರು, ಬಲ್ಲಿದರು, ಕವಿತಾಶಕ್ತಿ ನಿಪುಣರೂ ಆಗಿದ್ದರು.

**ಶಬ್ದಾರ್ಥಗಳು :**

ವಸುಧಾವಲಯ–ಭೂಮಂಡಲ, ಜನಪದ–ನಾಡು, ನಾಡಿನ ಜನ, ವಿಶದ–ನಿರ್ಮಲವಾದ, ವಿಷಯ–ಪ್ರಾಂತ, ಚದುರರ್–ಬುದ್ಧಿವಂತರು, ವಿದಿತ–ಪ್ರಸಿದ್ಧವಾದ, ನಗ–ಬೆಟ್ಟ, ಕಿಱುವಕ್ಕಳು–ಚಿಕ್ಕಮಕ್ಕಳು, ಸಕ್ಕದ–ಸಂಸ್ಕೃತ, ನೆಗೞ್ಪಲ್–ಹೇಳಲು, ತೊಡರ್ಚು–ಜೋಡಿಸು.

■■



# ೨. ಕೀರ್ತನೆಗಳು



## ೧. ನಾನೆಲ್ಲಿ ಜ್ಞಾನಿ? ನಾನೆಲ್ಲಿ ಸುಜನ? – ವ್ಯಾಸರಾಯರು

ನಾನೆಲ್ಲಿ ಜ್ಞಾನಿಯು? ನಾನೆಲ್ಲಿ ಸುಜನ?
ಹೀನ ವಿಷಯಂಗಳುಂಬ ಶ್ವಾನನಂತಿರುವೆ ॥ಪ॥

ಮೂತ್ರದ ಮನೆಗಾಗಿ ಗಾತ್ರ ಬಳಲಿಸಿ ಮದನ–
ಸೂತ್ರ ಬೊಂಬೆಯು ಎನಿಸಿ ನೇತ್ರದಿಂದ
ಪಾತ್ರದವರ ನೋಡಿ ಸ್ತೋತ್ರ ಮಾಡುತ ಹಿಗ್ಗಿ
ರಾತ್ರಿ ಹಗಲು ಕೆಟ್ಟ ವಾರ್ತೆಯಲ್ಲಿರುವೆ ॥೧॥

ಧನದಾಸೆ ಘನವಾಗಿ ಅಣು ಮಹಾತ್ಕಾರ್ಯದೊಳು
ಸೆಣಸಿ ದಣಿಯಲು ತೃಣವು ದೊರೆಯದಿರಲು
ಮನೆಮನೆಗೆ ಬಾಯ್ದೆರೆದು ಶುನಿಯಂತೆ ದಿನಗಳೆವ
ಮನುಜಪಶುವಿಗೆ ಇನ್ನು ಮುನಿಯೆಂಬೆಯೆಂತೋ ॥೨॥

ನಾಲಗೆಯ ರುಚಿಯಿಂದ ಸಾಲದಾಯಿತು ಬಯಕೆ
ಕಾಲಕಾಲಕೆ ನೆನೆಸಿ ಹಾಳಾದರೂ
ಶೀಲಗಳ ಕಳಕೊಂಡು ಚಾಲುವರಿಯುತ ಪರರ
ಆಲಯದ ಉಚ್ಛಿಷ್ಟ ಮೇಲಾದ ಸವಿಯು ॥೩॥

ಸ್ನಾನಧ್ಯಾನವರಿಯೆ ಸಾನುರಾಗದಿ ಭಕ್ತಿ
ಖೂನವಿಲ್ಲದೆ ಡಂಭ ಮೌನಿಯೆನಿಸಿ
ನಾನಾ ವಿಷಯ ಮನದಿ ನಾ ನೆನೆಸುವೆ ನಿತ್ಯ
ಏನಾದರೂ ಕಷ್ಟ ಕಾಣದಂತಿರುತಿಪ್ಪೆ ||೪||

ಪತಿತರೊಳು ಎನ್ನಂಥ ಪತಿತರೊಬ್ಬರ ಕಾಣೆ
ಗತಿಯು ನೀನಲ್ಲದೆ ಅನ್ಯರಿಲ್ಲ
ಪತಿತಪಾವನನೆಂಬೊ ಬಿರುದುಂಟು ಮಾಡುವ
ಕ್ಷಿತಿಪತಿ ಶ್ರೀಕೃಷ್ಣರಾಯ ನೀನಹುದೋ ||೫||

* * *

**ಕವಿ ಪರಿಚಯ :**

ಮೈಸೂರು ಜಿಲ್ಲೆಯ ಬನ್ನೂರು ಗ್ರಾಮದ ರಾಮಾಚಾರ್ಯ ಮತ್ತು ಸೀತಾಬಾಯಿ ದಂಪತಿಗಳ ಮಗನಾಗಿ ಜನಿಸಿದ ವ್ಯಾಸರಾಯರ (೧೪೪೭–೧೫೪೮) ಪೂರ್ವಾಶ್ರಮದ ಹೆಸರು ಯತಿರಾಜ. 'ಸಂಗೀತ ವಿದ್ಯಾ ಸಂಪ್ರದಾಯದ ಪ್ರವರ್ತಕ'ರೆಂದು ಖ್ಯಾತರಾದ ವ್ಯಾಸರಾಯರು ವಿಜಯನಗರ ಅರಸರ ಕಾಲದಲ್ಲಿ ರಾಜಗುರುಗಳಾಗಿ ಕನ್ನಡ ನಾಡಿನ ಭವ್ಯ ಸಂಸ್ಕೃತಿ, ಪರಂಪರೆಯನ್ನು ಉಳಿಸಿ, ಬೆಳೆಸಲು ಅಪಾರವಾಗಿ ಶ್ರಮಿಸಿದವರು. ಕನ್ನಡದ ಕೀರ್ತನೆಗಳನ್ನು ತಮ್ಮ ವ್ಯಾಸಪೀಠದ ಮೇಲೆ ಇಟ್ಟು, ಅದಕ್ಕೆ 'ಪುರಂದರೋಪನಿಷತ್ತು' ಎಂದು ಕರೆದು, ಸಂಸ್ಕೃತ ಪಂಡಿತರ ಬಾಯಿ ಮುಚ್ಚಿಸಿದರು. ಶ್ರೀಪಾದರಾಜರ ನಂತರ ದಾಸಸಾಹಿತ್ಯ ಪರಂಪರೆಯನ್ನು ಸಶಕ್ತವಾಗಿ ಬೆಳಸಿದ ವ್ಯಾಸರಾಯರ ೧೧೯ ಕೀರ್ತನೆಗಳು ಲಭ್ಯವಾಗಿವೆ. ಅಂಕಿತ ಪ್ರಧಾನ ಪದ್ಧತಿಯನ್ನು ಆರಂಭಿಸಿದ ವ್ಯಾಸರಾಯರು 'ಶ್ರೀಕೃಷ್ಣ' ಎಂಬ ಅಂಕಿತದಲ್ಲಿ ಕೀರ್ತನೆಗಳು ಮತ್ತು ಉಗಾಭೋಗಗಳನ್ನು ರಚಿಸಿದ್ದಾರೆ. ಪರಂದರದಾಸರು ಮತ್ತು ಕನಕದಾಸರಂತಹ ಶಿಷ್ಯೋತ್ತಮರ ಮೂಲಕ ದಾಸಸಾಹಿತ್ಯ ಪರಂಪರೆಯನ್ನು ಬೆಳೆಸಿದ ಹೆಚ್ಚುಗಾರಿಕೆ ವ್ಯಾಸರಾಯರದು.



**ಕೀರ್ತನೆಯ ಆಶಯ :**

ಭಕ್ತಿ, ಜ್ಞಾನ, ವೈರಾಗ್ಯ, ಸಮರ್ಪಣಾ ಭಾವಗಳು ವ್ಯಾಸರಾಯರ ಕೀರ್ತನೆಗಳ ಪ್ರಮುಖ ಆಶಯಗಳಾಗಿವೆ. ಆತ್ಮರತಿ, ಆತ್ಮಹತ್ಯೆ, ಆತ್ಮ ವಂಚನೆಗಳಿಗಿಂತ 'ಆತ್ಮವಿಮರ್ಶೆ'ಯು ಒಳ್ಳೆಯ ಮನುಷ್ಯನ ಲಕ್ಷಣ. 'ಲೋಕದ ಡೊಂಕು ತಿದ್ದುವ ಮೊದಲು ನಮ್ಮ ಡೊಂಕು ತಿದ್ದಿಕೊಳ್ಳಬೇಕು' ಎಂಬ ಸದಾಶಯವು ಆತ್ಮಾವಲೋಕನಕ್ಕೆ ಪ್ರೇರೇಪಿಸುತ್ತದೆ. ವ್ಯಾಸರಾಯರು ಈ ಕೀರ್ತನೆಯಲ್ಲಿ ಪ್ರಾಮಾಣಿಕ ಸ್ವಯಂ ವಿಮರ್ಶೆ ಮಾಡಿಕೊಳ್ಳುತ್ತಿದ್ದಾರೆ. ಕ್ಷುಲ್ಲಕ ವಿಷಯಗಳ ಬೆನ್ನು ಹತ್ತಿರುವ ನಾನು ಜ್ಞಾನಿ, ಸುಜನನಲ್ಲವೆನ್ನುವ ವ್ಯಾಸರಾಯರು ಅದಕ್ಕೆ ಹಲವು ಕಾರಣಗಳನ್ನು ಕೊಡುತ್ತಾರೆ. ಮನದ ಕಾಮನೆಗಳನ್ನು ಪೂರೈಸಿಕೊಳ್ಳುವ ಸಲುವಾಗಿ ವಂಚಕರನ್ನೂ ಹೊಗಳುತ್ತ ದಿನ ಕಳೆಯುತ್ತಿರುವೆ, ಹಣದಾಸೆಯೇ ಮಹತ್ತರವೆನಿಸಿ ಅದಕ್ಕೂ ಮಿಗಿಲಾದ ಅಧ್ಯಾತ್ಮಿಕ ಚಿಂತನೆಯಂತಹ ಅಮೂಲ್ಯ ವಿಷಯಗಳನ್ನು ಕಡೆಗಣಿಸುತ್ತಿರುವೆ. ಲೋಕ ರುಚಿಗಳನ್ನು ಎಷ್ಟು ಸವಿದರೂ ನಾಲಗೆಗೆ ಸಾಲದಾಗುತ್ತದೆ. ಅದಕ್ಕಾಗಿ ಸ್ವಾಭಿಮಾನವನ್ನೂ ಕಡೆಗಣಿಸಿ ಇನ್ನೊಬ್ಬರ ಎಂಜಲಿಗೆ ಕೈಯೊಡ್ಡುವ ಹೀನಸ್ಥಿತಿ ಬಂದೊದಗಿದೆ. ಸತ್ಯಶುದ್ಧ, ಸಮರ್ಪಣಾ ಭಾವದ ಭಕ್ತಿಯ ಅರಿವಿಲ್ಲದೆ ಜಾಣ ಮೌನದಿಂದ ಮನದಲ್ಲಿ ಲೌಕಿಕ ಚಿಂತನೆಯಲ್ಲಿ ಮುಳುಗಿದ್ದೇನೆ. ನನ್ನಂತಹ ಗತಿಗೆಟ್ಟವರು ಇನ್ನೂ ಇರಲಾರರು. ಆದ್ದರಿಂದ ವ್ಯಾಸರಾಯರು ಪತಿತ ಪಾವನನೆಂಬ ಬಿರುದು ಹೊಂದಿರುವ ಶ್ರೀಕೃಷ್ಣನನ್ನು ಪಾರು ಮಾಡು ಎಂದು ಬೇಡುತ್ತಿದ್ದಾರೆ.

ಪ್ರಸ್ತುತ ಪದ್ಯವನ್ನು ಡಾ.ಟಿ.ಎನ್. ನಾಗರತ್ನ ಅವರು ಸಂಪಾದಿಸಿದ ಮೈಸೂರು ವಿಶ್ವವಿದ್ಯಾನಿಲಯ ಪ್ರಕಟಿಸಿದ 'ದಾಸ ಸಾಹಿತ್ಯ ಸೌರಭ' ಕೃತಿಯಿಂದ ಆಯ್ದುಕೊಳ್ಳಲಾಗಿದೆ.

**ಶಬ್ದಾರ್ಥಗಳು :**

ಜ್ಞಾನಿ–ಬುದ್ಧಿವಂತ, ಸುಜನ–ಒಳ್ಳೆಯವನು,ಶ್ವಾನ–ನಾಯಿ, ಕ್ಷುಲ್ಲಕ ಪ್ರಾಣಿ, ಮದನ–ಕಾಮ, ಪಾತ್ರದವರ–ನಟನೆ ಮಾಡುವವರ, ಸ್ತೋತ್ರ–ಹೊಗಳು, ತೃಣ–ಹುಲ್ಲು, ಶುನಿ–ಶುನಕ, ನಾಯಿ, ಚಾಲು–ನಡೆ, ಆಲಯ–ಮನೆ, ಉಚ್ಚಿಷ್ಟ–ತಿಂದು ಮಿಕ್ಕಿದ್ದು, ಸಾನುರಾಗ–ಪ್ರೀತಿಯ, ಎಂಜಲು, ಖೂನ–ಪರಿಚಯ, ಡಂಭ–ವಂಚಕ, ಪತಿತ–ಪರಾಜಿತ, ನೀತಿಗೆಟ್ಟ, ಕ್ಷಿತಿಪತಿ–ಅರಸ, ಯಜಮಾನ.

■■

## ೨. ತನುವ ನೀರೊಳಗದ್ದಿ ಫಲವೇನು – ಪುರಂದರದಾಸರು

ತನುವ ನೀರೊಳಗದ್ದಿ ಫಲವೇನು? ತಮ್ಮ
ಮನದಲ್ಲಿ ದೃಢ ಭಕ್ತಿಯಿಲ್ಲದ ಮನುಜರು ॥ಪ॥

ದಾನ ಧರ್ಮಂಗಳ ಮಾಡುವುದೆ ಸ್ನಾನ
ಜ್ಞಾನ ತತ್ವಂಗಳ ತಿಳಿವುದೆ ಸ್ನಾನ
ಹೀನ ಪಾಪಂಗಳ ಬಿಡುವುದೆ ಸ್ನಾನ
ಧ್ಯಾನದಿ ಮಾಧವನನೋಳ್ಪುದೆ ಸ್ನಾನ ॥೧॥

ಗುರುಗಳ ಪಾದದರ್ಶನವೇ ಸ್ನಾನ
ಹಿರಿಯರ ಸೇವೆ ಮಾಡುವುದೇ ಸ್ನಾನ
ಕರೆದು ಅನ್ನವನಿಕ್ಕುವುದೊಂದು ಸ್ನಾನ
ನರಹರಿಚರಣ ನಂಬುವುದೇ ಸ್ನಾನ ॥೨॥

ದುಷ್ಟರ ಸಂಗವ ಬಿಡುವುದೆ ಸ್ನಾನ
ಶಿಷ್ಟರ ಸಂಗದೊಳಿರುವುದೆ ಸ್ನಾನ
ಸೃಷ್ಟಿಯೊಳಗೆ ಶ್ರೀ ಪುರಂದರ ವಿಠಲನ
ಮುಟ್ಟಿ ಭಜಿಸಿದರೆ ವಿರಜಾ ಸ್ನಾನ ॥೩॥

* * *



**ಕವಿ ಪರಿಚಯ :**

'ಕರ್ನಾಟಕ ಸಂಗೀತದ ಪಿತಾಮಹ'ರೆಂಬ ಹೆಗ್ಗಳಿಕೆ ಪಾತ್ರರಾದ ಪುರಂದರದಾಸರು (೧೪೮೪–೧೫೬೪) 'ದಾಸರೆಂದರೆ ಪುರಂದರದಾಸರಯ್ಯ' ಎಂದು ತಮ್ಮ ಗುರುಗಳಾದ ವ್ಯಾಸರಾಯರಿಂದ ಹೊಗಳಿಸಿಕೊಂಡ ಮಹೋನ್ನತ ವ್ಯಕ್ತಿತ್ವದವರು. 'ನವಕೋಟಿ ನಾರಾಯಣ' ಎಂಬ ಬಿರುದಾಂಕಿತರಾಗಿದ್ದ ಶ್ರೀನಿವಾಸ ನಾಯಕರು ತಮ್ಮ ಪತ್ನಿ ಸರಸ್ವತಿದೇವಿಯ ಅನನ್ಯ ಭಕ್ತಿ ಹಾಗೂ ದಾನ ಗುಣದ ಪರಿಣಾಮದಿಂದ ಬಂದೊದಗಿದ ವಿಶೇಷ ಸಂದರ್ಭವು ಅವರ ಜೀವನದಲ್ಲಿ ಮಹತ್ವದ ತಿರುವನ್ನು ತರುತ್ತದೆ. ದಾಸ ದೀಕ್ಷೆಯನ್ನು ಪಡೆದು, ವ್ಯಾಸರಾಯರ ಶಿಷ್ಯತ್ವದಲ್ಲಿ 'ಪುರಂದರ ವಿಠಲ' ಎಂಬ ಅಂಕಿತದಲ್ಲಿ ನಾಲ್ಕು ಲಕ್ಷದ ಎಪ್ಪತ್ತೈದು ಸಾವಿರ ಕೀರ್ತನೆಗಳು, ಸುಳಾದಿಗಳು ಮತ್ತು ಉಗಾಭೋಗಗಳನ್ನು ರಚಿಸಿದರೆಂದು ತಿಳಿದುಬರುತ್ತದೆ.

ಪುರಂದರ ದಾಸರ ಮೊದಲ ಹೆಸರು ಶ್ರೀನಿವಾಸ ನಾಯಕ. ತಂದೆ ವರದಪ್ಪ ನಾಯಕ, ತಾಯಿ ರುಕ್ಮಿಣಿ. ತಂದೆ ವರದಪ್ಪ ನಾಯಕ ಲೇವಾದೇವಿ ವೃತ್ತಿಯಲ್ಲಿದ್ದವರು. ಅನೇಕ ವರ್ಷಗಳ ಕಾಲ ಮಕ್ಕಳಾಗದ ಕಾರಣ ತಿರುಪತಿ ಶ್ರೀನಿವಾಸನಿಗೆ ಪ್ರಾರ್ಥನೆ ಸಲ್ಲಿಸಿದ ಮೇಲೆ ಮಗುವಾಯಿತು ಎಂಬ ನಂಬಿಕೆಯಿಂದ ಮಗನಿಗೆ ಶ್ರೀನಿವಾಸ ಎಂದು ನಾಮಕರಣ ಮಾಡಿದರು. ಪುರಂದರ ದಾಸರ ಜನಸ್ಥಳದ ಕುರಿತು ಕರ್ನಾಟಕ ಸರ್ಕಾರಕ್ಕೆ ೨೦೧೮ರಲ್ಲಿ ತಜ್ಞರು ವರದಿ ಸಲ್ಲಿಸಿದ ಪ್ರಕಾರ ಕರ್ನಾಟಕದ ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿ ತಾಲೂಕಿನ 'ಅರಗ' ಎನ್ನುವ ಗ್ರಾಮವೇ ಪುರಂದರದಾಸರ ಜನ್ಮಸ್ಥಳ.

**ಕೀರ್ತನೆಯ ಆಶಯ :**

ಹರಿಭಕ್ತಿ, ಜ್ಞಾನ, ವೈರಾಗ್ಯ, ಹರಿಗುರುಗಳ ಧ್ಯಾನ, ಸ್ತುತಿ, ಮನುಷ್ಯ ಜನ್ಮದ ಹೆಚ್ಚುಗಾರಿಕೆ, ಅಂತರಂಗದ ಅರಿವು, ಸಹಾನುಭೂತಿ, ನೀತಿ ಬೋಧನೆ, ಸಮಾಜ ವಿಮರ್ಶೆ, ವೈಚಾರಿಕತೆ, ಕೃಷ್ಣ ಲೀಲೆ ಮತ್ತು ಸಮರ್ಪಣಾ ಭಾವಗಳು ಪುರಂದರದಾಸರ ಕೀರ್ತನೆಗಳ ಪ್ರಮುಖ ಆಶಯಗಳಾಗಿವೆ. ಪ್ರಸ್ತುತ ಕೀರ್ತನೆಯಲ್ಲಿ ನಿಜವಾದ ಸ್ನಾನ ಯಾವುದು ಎಂಬುದರ ವೈಚಾರಿಕ ವಿವೇಚನೆಯಿದೆ. ಮನಸ್ಸು ಶುದ್ಧಿಯಾಗದ ಹೊರತು ದೇಹದ ಶುದ್ಧೀಕರಣಕ್ಕೆ ಯಾವುದೇ ಬೆಲೆಯಿಲ್ಲ ಎಂಬುದು ಪುರಂದರದಾಸರ ಪ್ರಮುಖ ಬೋಧನೆಯಾಗಿದೆ. ಕ್ರಿಯೆ, ಆಲೋಚನೆ, ಸಹವಾಸ ಇವುಗಳಲ್ಲಿ ಸಮನ್ವಯತೆಯಿರಬೇಕು. ಚಂಚಲವಾದ ಮನಸ್ಸನ್ನು ಬೇಕಾಬಿಟ್ಟಿಯಾಗಿ

ಹರಿಬಿಡದೆ ಸೃಷ್ಟಿಕರ್ತನಾದ ಪುರಂದರ ವಿಠಲನಲ್ಲಿ ಏಕೀಭವಿಸುವಂತೆ ಮಾಡುವುದೇ ನಿಜವಾದ ಶುಚಿತ್ವ ಎಂಬುದನ್ನು ಕೀರ್ತನೆಯು ಪರಿಣಾಮಕಾರಿಯಾಗಿ ತಿಳಿಸಿಕೊಡುತ್ತದೆ.

ಪ್ರಸ್ತುತ ಪದ್ಯವನ್ನು ಡಾ.ಶ್ರೀನಿವಾಸ ಹಾವನೂರು ಮತ್ತು ಹೊ.ರಾ.ಸತ್ಯನಾರಾಯಣರಾವ್ ಅವರು ಸಂಪಾದಿಸಿದ 'ಪುರಂದರದಾಸರ ಕೀರ್ತನೆಗಳು' ಕೃತಿಯಿಂದ ಆಯ್ದುಕೊಳ್ಳಲಾಗಿದೆ.

**ಶಬ್ದಾರ್ಥಗಳು :**

ತನು–ದೇಹ, ಮಾಧವ–ಕೃಷ್ಣ, ವಿಷ್ಣು, ಇಕ್ಕು–ಕೊಡು, ಚರಣ–ಪಾದ, ವಿರಜಾ–ಶ್ರೇಷ್ಠ, ಪರಮ.

■■



## ೩. ಕುಲ ಕುಲವೆಂದು ಹೊಡೆದಾಡದಿರಿ – ಕನಕದಾಸರು

ಕುಲ ಕುಲವೆಂದು ಹೊಡೆದಾಡದಿರಿ
ನಿಮ್ಮ ಕುಲದ ನೆಲೆಯನೇನಾದರೂ ಬಲ್ಲಿರಾ? ॥ ಪ ॥

ಹುಟ್ಟದ ಯೋನಿಗಳಿಲ್ಲ ಮೆಟ್ಟದ ಭೂಮಿಗಳಿಲ್ಲ
ಅಟ್ಟು ಉಣ್ಣದ ವಸ್ತುಗಳಿಲ್ಲ
ಗುಟ್ಟು ಕಾಣಿಸೆ ಬಂತು ಹಿರಿದೇನು ಕಿರಿದೇನು
ನೆಟ್ಟನೆ ಸರ್ವಜ್ಞನ ನೆನೆ ಕಂಡ್ಯ ಮನುಜ ॥ ೧ ॥

ಜಲವೆ ಸಕಲ ಕುಲಕೆ ತಾಯಲ್ಲವೆ?
ಜಲದ ಕುಲವನೇನಾದರೂ ಬಲ್ಲಿರ?
ಜಲದ ಬೊಬ್ಬುಳಿಯಂತೆ ಸ್ಥಿರವಲ್ಲವೀ ದೇಹ
ನೆಲೆಯನರಿತು ನೀ ನೆನೆ ಕಂಡ್ಯ ಮನುಜ ॥ ೨ ॥

ಹರಿಯೇ ಸರ್ವೋತ್ತಮ ಹರಿಯೇ ಸರ್ವೇಶ್ವರ
ಹರಿಮಯವೆಲ್ಲವೆನುತ ತಿಳಿದು
ಸಿರಿ ಕಾಗಿನೆಲೆಯಾದಿ ಕೇಶವರಾಯನ
ಚರಣ ಕಮಲವ ಕೀರ್ತಿಸುವನೇ ಕುಲಜ ॥ ೩ ॥

* * *

**ಕವಿ ಪರಿಚಯ :** ಹಾವೇರಿ ಜಿಲ್ಲೆಯ ಶಿಗ್ಗಾವಿ ತಾಲೂಕಿನ ಬಾಡ ಗ್ರಾಮದಲ್ಲಿ ಬೀರಪ್ಪ ಹಾಗೂ ಬಚ್ಚಮ್ಮ ದಂಪತಿಗಳ ಮಗನಾಗಿ ಜನಿಸಿದವರು ಕನಕದಾಸರು (ಸು.೧೪೮೬–೧೫೯೪). ಕನಕದಾಸರ ಮೂಲ ಹೆಸರು ತಿಮ್ಮಪ್ಪನಾಯಕ. ಬಂಕಾಪುರದ ಪಾಳೇಗಾರನಾಗಿದ್ದ ತಿಮ್ಮಪ್ಪನಾಯಕನು ನಿವೇಶನವೊಂದನ್ನು ಅಗೆಯುತ್ತಿರುವಾಗ ಅಪಾರ ಪ್ರಮಾಣದ ಬಂಗಾರ ದೊರೆಯುತ್ತದೆ. ಅಂದಿನಿಂದ ಇವರ ಹೆಸರು ಕನಕನಾಯಕ ಎಂದು ಬದಲಾಯಿತು ಎಂಬ ಪ್ರತೀತಿಯಿದೆ. ಮುಂದೆ ಯುದ್ಧವೊಂದರ ಸಂದರ್ಭದಲ್ಲಿ ವೈರಾಗ್ಯವುಂಟಾಗಿ ವ್ಯಾಸರಾಯರ ಶಿಷ್ಯತ್ವ ಪಡೆದು ದಾಸರಾಗಿ ಬದಲಾದರು. ಅಂದಿನ ಸಾಮಾಜಿಕ ವ್ಯವಸ್ಥೆಯ ಕೆಳಸ್ತರದಿಂದ ಬಂದಿದ್ದರೂ ಅಪಾರ ಪರಿಶ್ರಮ, ಶ್ರದ್ಧೆಯಿಂದ ಜ್ಞಾನಾರ್ಜನೆ ಪಡೆದು ಕೀರ್ತನೆಗಳನ್ನು ರಚಿಸಿದ್ದು ಮಾತ್ರವಲ್ಲದೆ ಮೋಹನ ತರಂಗಿಣಿ, ನಳ ಚರಿತ್ರೆ, ಹರಿಭಕ್ತಿಸಾರ, ರಾಮಧಾನ್ಯಚರಿತೆ ಎಂಬ ಕಾವ್ಯಗಳನ್ನು ರಚಿಸಿದರು. 'ಕಾಗಿನೆಲೆಯ ಆದಿಕೇಶವ' ಎಂಬ ಅಂಕಿತದಲ್ಲಿ ಕೀರ್ತನೆಗಳನ್ನು ರಚಿಸಿದ ಕನಕದಾಸರು, 'ದಾಸರಲ್ಲಿ ಕವಿಗಳು' ಎಂಬ ವಿಶಿಷ್ಟ ಅಭಿದಾನಕ್ಕೆ ಮತ್ತು ದಾಸ ಸಾಹಿತ್ಯ ಅಶ್ವಿನಿ ದೇವತೆಗಳು ಎಂಬ ಅಭಿದಾನಕ್ಕೂ ಪಾತ್ರರಾಗಿದ್ದಾರೆ.

**ಕೀರ್ತನೆಯ ಆಶಯ :** ತಮ್ಮ ಅಧ್ಯಾತ್ಮಿಕ ಸಾಧನಾ ಪಥದಲ್ಲಿ ಕನಕದಾಸರನ್ನು ಅತಿಯಾಗಿ ಕಾಡಿದ ಸಂಗತಿಯೆಂದರೆ ಜಾತಿ ವ್ಯವಸ್ಥೆ. ಸಮಾನತೆ, ಸಹಬಾಳ್ವೆ, ಮಾನವೀಯತೆಯಂತಹ ಉದಾತ್ತ ಮೌಲ್ಯಗಳಿಗೆ ಅಡ್ಡಿಯಾಗಿರುವ ಜಾತಿ ಪದ್ಧತಿಯು ಇಂದಿಗೂ ಮುಂದುವರೆದಿರುವುದು ದುರಂತವೇ ಸರಿ. 'ಕುಲ ಕುಲವೆಂದು ಹೊಡೆದಾಡದಿರಿ, ನಿಮ್ಮ ಕುಲದ ನೆಲೆಯನೇನಾದರೂ ಬಲ್ಲಿರಾ?' ಜಾತಿ, ಧರ್ಮವೆಂದು ಹೋರಾಟ ಮಾಡುವವರಿಗೆ ಕೀರ್ತನೆಗಳ ಮೂಲಕ ಪ್ರಶ್ನಿಸುತ್ತಾರೆ. ಭೂಮಿಯ ಮೇಲಿನ ಪ್ರತಿಯೊಂದು ಜೀವಿಯೂ ವಿಶಿಷ್ಟವಾಗಿದ್ದು ಅವುಗಳಲ್ಲಿ ತರತಮ ಭಾವನೆಯನ್ನು ತೋರುವುದು ಕ್ಷುಲ್ಲಕತನವಾಗಿದೆ. ಸೃಷ್ಟಿಯ ಸಕಲ ಜೀವರಾಶಿಯನ್ನು ಜೀವ ಜಲವೊಂದೇ ಪೋಷಿಸುತ್ತಿದೆ. ಆ ಜಲರಾಶಿಯ ಮೇಲಿನ ಗುಳ್ಳೆಯಂತೆ ಯಾವುದೇ ಕ್ಷಣದಲ್ಲಿ ಇಲ್ಲವಾಗುವ ನಶ್ವರ ಜೀವನದಲ್ಲಿ ಅವಾಸ್ತವಾದ ಜಾತಿ, ಕುಲವೆಂಬ ಮೌಢ್ಯಗಳಿಗೆ ಬಲಿಯಾಗದಿರಲು ಕನಕದಾಸರು ಎಚ್ಚರಿಸುತ್ತಾರೆ.

ಪ್ರಸ್ತುತ ಪದ್ಯವನ್ನು ಡಾ.ಟಿ.ಎನ್.ನಾಗರತ್ನ ಅವರು ಸಂಪಾದಿಸಿದ ಮೈಸೂರು ವಿಶ್ವವಿದ್ಯಾನಿಲಯ ಪ್ರಕಟಿಸಿದ 'ದಾಸ ಸಾಹಿತ್ಯ ಸೌರಭ' ಕೃತಿಯಿಂದ ಆಯ್ದುಕೊಳ್ಳಲಾಗಿದೆ.

■■



# ೩. ಎರಡು ಜನಪದ ಗೀತೆಗಳು

❖

## ೧. ಕೆರೆಗೆ ಹಾರ

ಕಲ್ಲನಕೇರಿ ಮಲ್ಲನಗೌಡ ಕೆರಿಯೊಂದ ಕಟ್ಟಿಸ್ಯಾನ
ಕೆರಿಯೊಂದ ಕಟ್ಟಿಸ್ಯಾನ ಸೆರಿಮುಕ್ಕ ನೀರಿಲ್ಲ ।

ಸೆರಿಮುಕ್ಕ ನೀರಿಲ್ಲ ಹೊತ್ತಿಗಿ ತೆಗಿಸ್ಯಾರ
ಹೊತ್ತಿಗಿ ತೆಗಿಸ್ಯಾರ ಜೋಯಿಸರ ಕೇಳ್ಯಾರ ।

ದೇವರಲ್ಲ ದಿಂಡರಲ್ಲ ದೆವ್ವಲ್ಲ ಭೂತಲ್ಲ
ಹಿರಿಸೊಸಿ ಮಲ್ಲವ್ವನ ಹಾರವ ಕೊಡಬೇಕು ।

ಹಿರಿಸೊಸಿ ಕೊಟ್ಟರ ಹಿರಿತನಕ ಯಾರಿಲ್ಲ
ಕಡಿಸೊಸಿ ಭಾಗೀರತಿನ ಹಾರವ ಕೊಡಬೇಕು ।

ಹಾರವ ಕೊಡಬೇಕಂತ ಮಾತಾತು ಮನಿಯಾಗ
ಸಣ್ಣಸೊಸಿ ಭಾಗೀರತಿ ತವರೀಗಿ ಹೊಂಟಾಳು ।

ಅತ್ತೆವ್ವ ನಾನೊಮ್ಮೆ ತವರೀಗಿ ಹೋಗತೀನಿ
ಸರ್ರನೆ ಹೋಗವ್ವ ಬರ್ರನೆ ಬಾರವ್ವ ।

ಮನೆ ಮುಂದ ಹೋಗುದಕ ಅವರಪ್ಪ ಬಂದಾನ
ಬಾಡಿದ ಮಾರ್‍ಯಾಕ? ಕಣ್ಣಾಗ ನೀರ್‍ಯಾಕ?
ನಮ್ಮತ್ತಿ ನಮ್ಮಾವ ಬ್ಯಾರೆ ಇಡತಾರಂತ ।

ಇಟ್ಟರ ಇಡಲೇಳು ಹೊಲಮನಿ ಕೊಡತೀನಿ
ಹೊಲಮನಿ ಒಯ್ದು ಹೊಳದಂಡ್ಯಾಗ ಹಾಕಪ್ಪ ।

ಅತ್ತತ್ತ ಹೋಗುತ್ತಲೇ ಅವರವ್ವ ಬಂದಾಳು
ಎಂದಿಲ್ಲದ ಭಾಗೀರತಿ ಇಂದ್ಯಾಕಳುತಾ ಬಂದೆವ್ವ?

ಬಾಡಿದ ಮಾರ್ಯಾಕ? ಕಣ್ಣಾಗ ನೀರ್ಯಾಕ?
ನಮ್ಮತ್ತಿ ನಮ್ಮಾವ ಬ್ಯಾರೆ ಇಡತಾರಂತ ।

ಇಟ್ಟರ ಇಡಲೇಳು ವಾಲಿಜೋಡ ಕೊಡಸತೀನಿ
ವಾಲಿಯ ಜೋಡ ಒಯ್ದು ಒಲಿಯಾಗ ಹಾಕಪ್ಪ ।

ಮುಂದಕ ಹೋಗುತಲೆ ಅವರಕ್ಕ ಬಂದಾಳು
ಎಂದಿಲ್ಲದ ಭಾಗೀರತಿ ಇಂದ್ಯಾಕ ಈ ದುಕ್ಕ?
ನಮ್ಮತ್ತೆ ನಮ್ಮಾವ ಬ್ಯಾರೆ ಇಡತಾರಂತ ।

ಇಟ್ಟರೆ ಇಡಲೇಳ ಮಕ್ಕಳ ಜೋಡಿಗೆ ಕಳವತೇನ
ಮಕ್ಕಳಿದ್ದೇನಕ್ಕ ದುಕ್ಕ ಕಳದಾವೇನ? ।

ಸಣ್ಣಸೊಸಿ ಭಾಗೀರತಿ ತೌರುಮನಿ ಬಿಟ್ಟು
ತೌರುಮನಿ ಬಿಟ್ಟು ಗೆಣತಿ ಮನೀಗಿ ನಡೆದಾಳು ।

ತಲೆಬಾಗಿಲದಾಗ ಗೆಳತೀನ ಕಂಡಾಳು
ಎಂದಿಲ್ಲದ ಭಾಗೀರತಿ ಇಂದ್ಯಾಕ ಈ ಅಳುವು? ।

ಅಂಜಿ ಹೇಳಲೆ ಗೆಳತಿ ಅಳುಕಿ ಹೇಳಲೆ ಗೆಳತಿ
ನಮ್ಮತ್ತಿ ನಮ್ಮಾವ ಕೆರಿಗಿ ಹಾರ ಕೊಡತಾರಂತ
ಕೊಟ್ಟರೆ ಕೊಡಲೇಳು ಇಟ್ಟಾಂಗ ಇರಬೇಕು ।



ಹುಟ್ಟಿದ ಮನೆಯಿಂದ ಮೆಟ್ಟಿಲಿಳಿವಾಗ
ಹೊಟ್ಟೆಗೆ ಸಿಡಿಲು ಬಡಿದ್ಹಾಂಗ ಹೆತ್ತವ್ವಗ
ಕಣ್ಣೀರು ಹೊಳೆಯಾದೊ ।

ಸುಣ್ಣದ ಗಡಿಗ್ಯಾಗ ತಣ್ಣೀರು ಹುಯಿದಾಂಗ
ನನ ತಂಗಿ ನನ ಮನೆಗಿಂದು ಎರವಾದೆ ।

ಸರ್ರನೆ ಹೋದಳು ಬರ್ರನೆ ಬಂದಳು
ಬ್ಯಾಳಿಯ ಹಸನ ಮಾಡತ ಬಿಟ್ಟಾಳೊ ಕಣ್ಣೀರ
ಬ್ಯಾಳ್ಯಾಗ ಹಳ್ಳು ಬಂದು ಕಣ್ಣಾಗ ಬಿದ್ದವು ಮಾವ ।

ಅಕ್ಕಿಯ ಹಸನ ಮಾಡತ ಉಕ್ಕ್ಯಾವ ಕಣ್ಣೀರ
ಎಂದಿಲ್ಲದ ಭಾಗೀರತಿ ಇಂದ್ಯಾಕ ಕಣ್ಣೀರು?
ಅಕ್ಕ್ಯಾಗಿನ ಹಳ್ಳೊಂದು ಕಣ್ಣಾಗ ಬತ್ತತ್ತಿ ।

ಉಕ್ಕುವ ನೀರಾಗ ಅಕ್ಕಿಯ ಸುರುವ್ಯಾರ
ಸಕ್ಕರಿ ಹಾಲಾಗ ಸ್ಯಾವೀಗಿ ಸುರುವ್ಯಾರ
ಹತ್ತು ಕೊಪ್ಪರಿಗಿ ನೀರು ಉಕ್ಕಿ ಮಳ್ಳತಿತ್ತು ।

ನಿಂಗವ್ವ ಜಳಕ ಮಾಡ ನೀಲವ್ವ ಜಳಕ ಮಾಡ
ನಿಂಗವ್ವ ನಾ ಒಲ್ಲೆ ನೀಲವ್ವ ನಾ ಒಲ್ಲೆ ।

ಗಂಗವ್ವ ಜಳಕ ಮಾಡ ಗೌರವ್ವ ಜಳಕ ಮಾಡ
ಗಂಗವ್ವ ನಾ ಒಲ್ಲೆ ಗೌರವ್ವ ನಾ ಒಲ್ಲೆ ।

ಸಣ್ಣಸೊಸಿ ಭಾಗವ್ವ ನೀನರ ಜಳಕ ಮಾಡ
ಸಣ್ಣಸೊಸಿ ಭಾಗೀರತಿ ಜಳಕಾನ ಮಾಡ್ಯಾಳ ।

ಜಳಕಾನ ಮಾಡ್ಯಾಳ ಬಂಗಾರ ಬುಟ್ಟಿ ತುಂಬ್ಯಾಳ
ಬಂಗಾರ ಬುಟ್ಟಿ ತುಂಬ್ಯಾಳ ಸಿಂಗಾರ ಸಿಂಬಿ ಮಾಡ್ಯಾಳ ।

ಸಿಂಗಾರ ಸಿಂಬಿ ಮಾಡ್ಯಾಳ ಮುಂದು ಮುಂದ ಹೊಂಟಾಳ
ಮುಂದ ಮುಂದ ಭಾಗೀರತಿ ಹಿಂದ ಹಿಂದ ಎಲ್ಲಾರು ।

ಗಂಗೀ ಪೂಜಿ ಮಾಡ್ಯಾರ ಬಿಲ್ಲಪತ್ರಿ ಏರಿಸ್ಯಾರ
ಬಿಲ್ಲಪತ್ರಿ ಏರಿಸ್ಯಾರ ಈಬತ್ತಿ ಧರಿಸ್ಯಾರ ।

ಸೀರಿ ಕುಬುಸ ಏರಿಸ್ಯಾರ ಹೂವಿನ ದಂಡಿ ಮುಡಿಸ್ಯಾರ
ಹೂವಿನ ದಂಡಿ ಮುಡಿಸ್ಯಾರ ನೇವದಿ ಮಾಡ್ಯಾರ ।

ನೇವದಿ ಮಾಡ್ಯಾರ ಎಲ್ಲಾರೂ ಉಂಡಾರ
ಎಲ್ಲರೂ ಉಂಡಾರ ಉಳಿದದ್ದು ತುಂಬ್ಯಾರ ।

ಉಳಿದದ್ದು ತುಂಬ್ಯಾರ ಬಂಗಾರಬುಟ್ಟಿ ಹೊತ್ತಾರೆ
ಬುಟ್ಟಿ ಹೊತ್ತು ನಡದಾರ ಬಂಗಾರ ಬಟ್ಲ ಮರತಾರ ।

ಗಂಗವ್ವ ನೀ ಹೋಗ ಗೌರವ್ವ ನೀ ಹೋಗ
ಗಂಗವ್ವ ನಾ ಒಲ್ಲೆ ಗೌರವ್ವ ನಾ ಒಲ್ಲೆ ।

ನಿಂಗವ್ವ ನೀ ಹೋಗ ನೀಲವ್ವ ನೀ ಹೋಗ
ನಿಂಗವ್ವ ನಾ ಒಲ್ಲೆ ನೀಲವ್ವ ನಾ ಒಲ್ಲೆ ।

ಸಣ್ಣಸೊಸಿ ಭಾಗೀರಥಿ ನೀ ತರಹೋಗವ್ವ
ಬಿರಿಬಿರಿ ಹೋಗ್ಯಾಳ ಬಂಗಾರ ಬಟ್ಟಲ ತಗೊಂಡಾಳು ।

ಒಂದ ಮೆಟ್ಲ ಏರುದಕ ಪಾದ ಬಂದಾಳ ಗಂಗೀ
ಎರಡು ಮೆಟ್ಲ ಏರುದಕ ಪಾದ ಮುಳಿಗಿಸ್ಯಾಳ ಗಂಗೀ ।

ಮೂರು ಮೆಟ್ಲ ಏರುದಕ ಮೊಳಕಾಲಿಗಿ ಬಂದಾಳ ಗಂಗೀ
ನಾಕು ಮೆಟ್ಲ ಏರುದಕ ನಡುಮಟ ಬಂದಾಳ ಗಂಗೀ ।



ಐದು ಮೆಟ್ಲ ಏರುದಕ ತುಂಬಿ ಹರಿದಾಳ ಗಂಗೀ
ಸಣ್ಣಸೊಸಿ ಭಾಗೀರತಿ ಕೆರೆಗ್ಹಾರವಾದಳು ।

ಗಂಡ ಮಾದೇವರಾಯ ದಂಡಿನಾಗ ಐದಾನು
ದಂಡಿನಾಗ ಐದಾನು ಕಂಡಾನು ಕೆಟ್ಟ ಕನಸಾ ।

ಶೆಲ್ಲೆ ಸುಟ್ಟಂಗಾತು ಕೋಲು ಮುರಿದಂಗಾತು
ಕಟ್ಟಿಸಿದ ಮಹಲೆಲ್ಲ ಥಟ್ಟನೆ ಬಿಂದಂಗಾತು ।

ಗಂಡ ಮಾದೇವರಾಯ ಹತ್ತಿದ ಬತ್ತಲಗುದರಿ
ಹತ್ತಿದ ಬತ್ತಲಗುದರಿ ಒತ್ತಾರ ಬಂದಾನ ಮನಿಗಿ ।

ಬಂದ ಮಾದೇವನ ತಂದೆತಾಯಿ ನೋಡ್ಯಾರ
ಗಂಗವ್ವ ನೀರ ಕೊಡ ಗೌರವ್ವ ನೀರ ಕೊಡ ।

ಗಂಗವ್ವ ನೀರ್ಯಾಕ? ಗೌರವ್ವ ನೀರ್ಯಾಕ?
ನನ ಮಡದಿ ಭಾಗೀರತಿ ಎಲ್ಲಿಗ್ಹೋಗ್ಯಾಳವ್ವ?
ನಿನ ಮಡದಿ ಭಾಗೀರತಿ ತೌರೀಗಿ ಹೋಗ್ಯಾಳ ।

ಗಂಡ ಮಾದೇವರಾಯ ಹತ್ತಿದ ಬತ್ತಲಗುದರಿ
ಹತ್ತಿದ ಬತ್ತಲಗುದರಿ ಹೊಂಟಾನ ಅತ್ತಿ ಮನಿಗಿ ।

ಬಂದ ಅಳಿಯನ ನೋಡಿ ಅಂದಾಳ ಅತ್ತೆವ್ವ
ನಿಂಬೆವ್ವ ನೀರ ಕೊಡ ನೀಲವ್ವ ನೀರ ಕೊಡ ।

ನಿಂಬೆವ್ವ ನೀರ್ಯಾಕ? ನೀಲವ್ವ ನೀರ್ಯಾಕ?
ನನ ಮಡದಿ ಭಾಗೀರತಿ ಎಲ್ಲಿಗ್ಹೋಗ್ಯಾಳತ್ತಿ?
ನಿನ ಮಡದಿ ಭಾಗೀರತಿ ಗೆಣತಿ ಮನೀಗಿ ಹೋಗ್ಯಾಳಪ್ಪ ।

ಗಂಡ ಮಾದೇವರಾಯ ಹತ್ತಿದ ಬತ್ತಲಗುದರಿ
ಹತ್ತಿದ ಬತ್ತಲಗುದರಿ ಗೆಣತಿ ಮನಿಗಿ ಸವಾರಿ ।

ಬಂದಿರೊ ಮಾದೇವನ ಕಂಡಾಳು ಗೆಣತೆವ್ವ
ಬಾಳವ್ವ ನೀರ ಕೊಡ ಬಸವ್ವ ನೀರ ಕೊಡ ।

ಬಾಳವ್ವ ನೀರ್‍ಯಾಕ? ಬಸವ್ವ ನೀರ್‍ಯಾಕ?
ನನ ಮಡದಿ ಭಾಗೀರತಿ ಎಲ್ಲಿಗ್ಹೋಗ್ಯಾಳಕ್ಕ? ।

ನಿನ ಮಡದಿ ಭಾಗೀರತಿದು ಏನು ಹೇಳಲಿ ಸೂರಿ?
ನಿಮ್ಮಪ್ಪ ನಿಮ್ಮವ್ವ ಕೆರಿಗಿ ಹಾರ ಕೊಟ್ಟಾರಂತ ।

ಗಂಡ ಮಾದೇವರಾಯ ಹತ್ತಿದ ಬತ್ತಲಗುದರಿ
ಹತ್ತಿದ ಬತ್ತಲಗುದರಿ ಹೊಂಟಾನೊ ಹೌಹಾರಿ ।

ಕೆರಿಯ ದಂಡೀಗಿ ಬಂದು ಕಣ್ಣೀರು ಇಟ್ಟಾನ
ಕಣ್ಣೀರು ಇಟ್ಟಾನ ನಿಟ್ಟುಸಿರು ಬಿಟ್ಟಾನ ।

ಸಾವಿರ ವರಹ ಕೊಟ್ಟ್ರೂ ಸಿಗಲಾರದ ಸತಿ ನೀನು
ನನ ಬಿಟ್ಟು ಎಲ್ಲಿ ಹೋದೆ? ನನ ಬಿಟ್ಟು ಎಲ್ಲಿ ಹೋದೆ? ।

ಮುನ್ನೂರು ವರಹ ಕೊಟ್ಟು ಮುತ್ತಿನೋಲೆ ಮಾಡಿಸಿದ್ದೆ
ಮುತ್ತಿನೋಲೆ ಇಟಗೊಳ್ಳೊ ಮುತ್ತೈದೆ ಎಲ್ಲಿಗ್ಹೋದೆ? ।

ಇಷ್ಟು ಮಾತಾಡಿ ಮಹಾದೇವರಾಯ ಇಟ್ಟಾನ ಕಣ್ಣೀರ
ಇಟ್ಟಾನ ಕಣ್ಣೀರ ಹಾರಿದ ಕೆರೆ ನೀರಾಗ ॥

* * *



## ೨. ಗೋವಿನ ಹಾಡು

ಧರಣಿ ಮಂಡಲ ಮಧ್ಯದೊಳಗೆ ಮೆರೆವುದೈವತ್ತಾರು ದೇಶದಿ
ಇರುವ ಕಾಳಿಂಗನೆಂಬ ಗೊಲ್ಲನು ಪರಿಯನಾನೆಂತು ಪೇಳ್ವೆನು
ಉದಯಕಾಲದೊಳೆದ್ದು ಗೊಲ್ಲನು ನದಿಯ ಸ್ನಾನವ ಮಾಡಿಕೊಂಡು
ಮದನ ತಿಲಕವ ಹಣೆಯೊಳಿಟ್ಟು ಚದುರ ಶಿಕೆಯನು ಹಾಕಿದ

ಎಳೆಯ ಮಾವಿನ ಮರದ ಕೆಳಗೆ ಕೊಳನೂದುತ ಗೊಲ್ಲಗೌಡನು
ಬಳಸಿ ನಿಂದ ತುರುಗಳನ್ನು ಬಳಿಗೆ ಕರೆದನು ಹರುಷದಿ
ಗಂಗೆ ಬಾರೆ ಗೌರಿ ಬಾರೆ ತುಂಗಭದ್ರೆ ನೀನು ಬಾರೆ
ಕಾಮಧೇನು ನೀನು ಬಾರೆಂದು ಪ್ರೇಮದಿಂದಲಿ ಕರೆದನು

ಪುಣ್ಯಕೋಟಿಯೆ ನೀನು ಬಾರೆ ಪುಣ್ಯವಾಹಿನಿ ನೀನು ಬಾರೆ
ಪೂರ್ಣಗುಣಸಂಪನ್ನೆ ಬಾರೆಂದು ಪ್ರೇಮದಿ ಗೊಲ್ಲ ಕರೆದನು
ಗೊಲ್ಲ ಕರೆದಾ ಧ್ವನಿಯು ಕೇಳಿ ಎಲ್ಲ ಪಶುಗಳು ಬಂದುವಾಗ
ಚೆಲ್ಲಿ ಸೂಸಿ ಹಾಲು ಕರೆಯಲು ಅಲ್ಲಿ ತುಂಬಿತು ಬಿಂದಿಗೆ

ಒಡನೆ ದೊಡ್ಡಿಯ ಬಿಡುತ ಪಶುಗಳು ನಡೆದವಾಗಾರಣ್ಯಕೆ
ಕಡಲು ಮೇಘವು ತೆರಳುವಂದದಿ ನಡೆದವಾಗಾರಣ್ಯಕೆ
ಅಟ್ಟಬೆಟ್ಟದ ಕಿಬ್ಬಿಯೊಳಗೆ ಇಟ್ಟಡೆಯ ಬೆಟ್ಟಾದ ನಡುವೆ
ದಟ್ಟೈಸಿದಾ ಸಸಿಗಳೆಡೆಯೊಳು ಮುಟ್ಟಿ ಮೇದವು ಹುಲ್ಲನು

ಹಬ್ಬಿದಾ ಮಲೆ ಮಧ್ಯದೊಳಗೆ ಅರ್ಭುತಾನೆಂತೆಂಬ ವ್ಯಾಘ್ರನು
ಗಬ್ಬಿತನದೊಳು ಬೆಟ್ಟದಾ ಅಡಿ ಕಿಬ್ಬಿಯೊಳು ತಾನಿರುವನು
ಒಡಲಿಗೇಳು ದಿವಸದಿಂದ ತಡೆದಾಹಾರವ ಬಳಲಿ ವ್ಯಾಘ್ರನು
ತುಡುಕಿ ಎರೆದವ ರಭಸದಿಂದೊಗ್ಗೊಡೆದವಾಗಾ ಗೋವ್ಗಳು

ಅದರ ರಭಸಕೆ ನಿಲ್ಲನರಿಯದ ಕದುಬಿ ಕಮರಿಯ ಬಿದ್ದು ಪಶುಗಳು
ಪದರಿ ತಲ್ಲಣಗೊಂಡ ಪಶುಗಳು ಚೆದರಿ ಓಡಿಹೋದವು
ಕನ್ನೆಮಗನಾ ಪಡೆದುಕೊಂಡು ತನ್ನ ಕಂದನ ನೆನೆದುಕೊಂಡು
ಪುಣ್ಯಕೋಟಿ ಎಂಬ ಪಶುವು ಚೆಂದದಿ ತಾ ಬರುತಿದೆ

ಇಂದು ಎನಗಾಹಾರ ಸಂದಿತು ಎನುತಲಾಗ ದುಷ್ಟ ವ್ಯಾಘ್ರನು
ಬಂದು ಬಳಸಿ ಅಡ್ಡಗಟ್ಟಿ ನಿಂತುಕೊಂಡಿತಾಗಾ ಪಶುವನು
ಖೂಳ ಹುಲಿಯಾ ಅಡ್ಡಕಟ್ಟಿ ಬೀಳಹೊಯ್ವೆನು ನಿನ್ನನೆನುತಲಿ
ಸೀಳಿಬಿಸುಡುವೆ ಬೇಗನೆನುತಾ ಪ್ರಳಯವಾಗಿಯೆ ಕೋಪಿಸೆ

ಒಂದು ಬಿನ್ನಹ ಹುಲಿಯರಾಯನೆ ಕಂದನ್ನೈದನೆ ಮನೆಯ ಒಳಗೆ
ಒಂದು ನಿಮಿಷದಿ ಮೊಲೆಯ ಕೊಟ್ಟು ಬಂದು ನಾನಿಲ್ಲಿ ನಿಲ್ಲುವೆ
ಹಸಿದ ವೇಳೆಗೆ ಸಿಕ್ಕಿದೊಡವೆಯ ವಶವಮಾಡಿಕೊಳ್ಳದೀಗ
ನುಸುಳಿಹೋದರೆ ನೀನು ಬರುವೆಯ ಹಸನಾಯಿತಿಗೆಂದಿತು

ಮೂರು ಮೂರ್ತಿಗಳಾಣೆ ಬರುವೆನು ಸೂರ್ಯ–ಚಂದ್ರಮನಾಣೆ ಬರುವೆನು
ಧಾರುಣಿದೇವಿಯಾಣೆ ಬರುವೆನು ಎಂದು ಭಾಷೆಯ ಮಾಡಿತು
ಬರುವೆನೆಂದು ಭಾಷೆ ಮಾಡಿ ತಪ್ಪೆನೆಂದಾ ಪುಣ್ಯಕೋಟಿಯು
ಒಪ್ಪಿಸಲೊಡೊಂಬಟ್ಟು ವ್ಯಾಘ್ರನು ಅಪ್ಪಣೆಯ ತಾ ಕೊಟ್ಟಿತು

ಅಲ್ಲಿಂದ ಕಳುಹಿಸಿಕೊಂಡು ನಿಲ್ಲದೆ ದೊಡ್ಡಿಗೆ ಬಂದು
ಚೆಲ್ವ ಮಗನನು ಕಂಡು ಬೇಗ ಅಲ್ಲಿ ಕೊಟ್ಟಿತು ಮೊಲೆಯನು
ಕಟ್ಟಕಡೆಯಲಿ ಮೇಯದಿರು ಬೆಟ್ಟದೊತ್ತಿಗೆ ಹೋಗದಿರು
ದುಷ್ಟವ್ಯಾಘ್ರಗಳುಂಟು ಅಲ್ಲಿ ನಟ್ಟನಡುವೆ ಬಾರಯ್ಯನೇ

ಕೊಂದೆನೆಂಬ ದುಷ್ಟವ್ಯಾಘ್ರಗೆ ಚೆಂದದಿಂದ ಭಾಷೆಯಿತ್ತು
ಕಂದ ನಿನ್ನನು ನೋಡಿ ಪೋಗುವೆನೆಂದು ಬಂದೆನು ದೊಡ್ಡಿಗೆ
ಅಮ್ಮ ನೀನು ಸಾಯಲೇಕೆ? ಸುಮ್ಮನಿರು ನೀ ಎಲ್ಲರ ಹಾಗೆ
ತಮ್ಮ ತಾಯಿಗೆ ಪೇಳಿ ಕರುವು ಸುಮ್ಮಾನವಡಗಿ ನಿಂದಿತು



ಕೊಟ್ಟ ಭಾಷೆಗೆ ತಪ್ಪಲಾರೆನು ಕೆಟ್ಟ ಯೋಚನೆ ಮಾಡಲಾರೆನು
ನಿಷ್ಟೆಯಿಂದಲಿ ಪೋಪೆನಲ್ಲಿಗೆ ಕಟ್ಟಕಡೆಗಿದು ಖಂಡಿತ
ಸತ್ಯವೇ ನಮ್ಮ ತಾಯಿ–ತಂದೆ ಸತ್ಯವೇ ನಮ್ಮ ಬಂಧು ಬಳಗ
ಸತ್ಯ ವಾಕ್ಯಕೆ ತಪ್ಪಿ ನಡೆದರೆ ಮೆಚ್ಚನಾ ಪರಮಾತ್ಮನು

ಆರ ಮೊಲೆಯಾ ಕುಡಿಯಲಮ್ಮ? ಆರ ಸೇರಿ ಬದುಕಲಮ್ಮ?
ಆರ ಬಳಿಯಲಿ ಮಲಗಲಮ್ಮ? ಆರು ನನಗೆ ಹಿತವರು?
ಅಮ್ಮಗಳಿರಾ! ಅಕ್ಕಗಳಿರಾ! ಎನ್ನ ತಾಯೊಡಹುಟ್ಟುಗಳಿರಾ!
ನಿಮ್ಮ ಕಂದಾನೆಂದು ಕಾಣಿರಿ, ತಬ್ಬಲಿಯ ಮಗನ್ನೈದನು

ಮುಂದೆ ಬಂದರೆ ಹಾಯಬೇಡಿ, ಹಿಂದೆ ಬಂದರೆ ಒದೆಯಬೇಡಿ
ನಿಮ್ಮ ಕಂದನೆಂದು ಕಂಡಿರಿ ತಬ್ಬಲಿಯ ಕಂದೈದನೆ
ತಬ್ಬಲಿಯು ನೀನಾದೆ ಮಗನೆ, ಹೆಬ್ಬುಲಿಯ ಬಾಯನ್ನು ಹೊಗೆವೆನು
ಇಬ್ಬರಾ ಋಣ ತೀರಿತೆಂದು ತಬ್ಬಿಕೊಂಡಿತು ಕಂದನ

ಕಂದನಿಗೆ ಬುದ್ಧಿ ಹೇಳಿ ಬಂದಳಾಗ ಪುಣ್ಯಕೋಟಿಯು
ಚೆಂದದಿಂದ ಪುಣ್ಯನದಿಯೊಳು ಮಿಂದು ಸ್ನಾನವ ಮಾಡಿತು
ಗೋವು ಸ್ನಾನವ ಮಾಡಿಕೊಂಡು ಗವಿಯ ಬಾಗಿಲ ಪೊಕ್ಕು ನಿಂತು
ಸಾವಕಾಶವ ಮಾಡದಂತೆ ವ್ಯಾಘ್ರರಾಯನ ಕರೆದಳು

ಖಂಡವಿದೆಕೋ ಮಾಂಸವಿದೆಕೋ ಗುಂಡಿಗೆಯ ಬಿಸಿರಕ್ತವಿದೆಕೋ
ಉಂಡು ಸಂತಸಗೊಂಡು ನೀ ಭೂಮಂಡಲದೊಳು ಬಾಳಯ್ಯನೆ
ಪುಣ್ಯಕೋಟಿಯು ಬಂದು ನುಡಿಯೆ ತನ್ನ ಮನದೊಳು ಹುಲಿಯರಾಯನು
ಕನ್ನೆಯಿವಳನು ಕೊಂದುತಿಂದರೆ ಎನ್ನ ನರಹರಿ ಮೆಚ್ಚನು

ಎನ್ನ ಒಡಹುಟ್ಟಕ್ಕ ನೀನು ನಿನ್ನ ಕೊಂದು ಏನ ಪಡೆವೆನು
ನಿನ್ನ ಪಾದದ ಮೇಲೆ ಬಿದ್ದು ಎನ್ನ ಪ್ರಾಣವ ಬಿಡುವೆನು
ಯಾಕಯ್ಯ ಹುಲಿರಾಯ ಕೇಳು ಜೋಕೆಯಿಂದಲಿ ಎನ್ನನೊಲ್ಲದೆ
ನೂಕಿ ನೀನು ಸಾಯಲೇಕೆ ಬೇಕೆಂದೂ ನಾ ಬಂದೆನು

ಪುಣ್ಯಕೋಟಿಯ ಮಾತ ಕೇಳಿ ಕಣ್ಣಿನೊಳಗೆ ನೀರಸುರಿಯುತ
ಅನ್ಯಕಾರಿಯು ತಾನು ಎನುತಲಿ ತನ್ನ ಮನದೊಳು ಧ್ಯಾನಿಸಿ
ಮೂರು ಮೂರ್ತಿಗೆ ಕೈಯ್ಯ ಮುಗಿದು ಸೇರಿ ಎಂಟು ದಿಕ್ಕನೋಡಿ
ಹಾರಿ ಆಕಾಶಕ್ಕೆ ನೆಗೆದು ತನ್ನ ಪ್ರಾಣವ ಬಿಟ್ಟಿತು.

* * *

**ಜನಪದ ಸಾಹಿತ್ಯದ ಕುರಿತು :**

ಜನಪದ ಸಾಹಿತ್ಯವು ಸಾಮೂಹಿಕ ಸೃಷ್ಟಿಯಾಗಿದೆ. ಅದು ಅನಕ್ಷರಸ್ಥ ಜನಪದರ ನಾಲಗೆಯ ಮೇಲೆ ಜೀವಂತವಾಗಿರುವ ಕಂಠಸ್ಥ ಸಾಹಿತ್ಯವಾಗಿದೆ. ಜನಪದವು ಕ್ರಿಯಾಮೂಲ ಸಾಹಿತ್ಯವಾಗಿದೆ. ನಮ್ಮ ಸಂಸ್ಕೃತಿಯ ಸಾರ ರೂಪವಾದ ಜನಪದ ಸಾಹಿತ್ಯವು ಬಹುಸಂಖ್ಯಾತರ ಆಶೋತ್ತರಗಳ ಪ್ರತೀಕವೂ ಹೌದು. ಅದರ ಬೇರುಗಳು ಜನಸಂಸ್ಕೃತಿಯ ಅಂತರಾಳದಲ್ಲಿವೆ. ಜನಪದ ಗೀತೆ, ಕಥೆ, ಕಥನಗೀತೆಯಂತಹ ಅನೇಕ ಪ್ರಕಾರಗಳಲ್ಲಿ ಜನಪದ ಜನಜೀವನದ ರೀತಿ–ನೀತಿಗಳು ವ್ಯಕ್ತವಾಗಿವೆ. ಅದರಲ್ಲೂ ಕಥನ ಗೀತೆಗಳು ಕನ್ನಡ ಬಹುಮುಖ್ಯ ಜನಪದ ಪ್ರಕಾರವಾಗಿದೆ. ಜನಪದ ಸಾಹಿತ್ಯದಲ್ಲಿ ತ್ಯಾಗ, ಬಲಿದಾನಕ್ಕೆ ಸಂಬಂಧಿಸಿದ ಅನೇಕ ಕಥನ ಗೀತೆಗಳು ಹೇರಳವಾಗಿ ದೊರೆಯುತ್ತವೆ. ಕಥನ ಗೀತೆಗಳು ಜನಪದ ಸಂಸ್ಕೃತಿಯ ಮಹಾದರ್ಶನವನ್ನು ಮಾಡಿಸುತ್ತವೆ.

**ಜನಪದ ಕಾವ್ಯದ ಆಶಯ :**

'ಕೆರೆಗೆ ಹಾರ'ವು ಕನ್ನಡದ ಬಹು ಪ್ರಸಿದ್ಧವಾದ ಜನಪದ ಕಥನ ಗೀತೆಗಳಲ್ಲಿ ಒಂದು. ಪುರುಷ ಪ್ರಧಾನ ಸಮಾಜದಲ್ಲಿ ಹೆಣ್ಣು ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳಲು ಹೋರಾಟ ಮಾಡಬೇಕಾದ ಅನಿವಾರ್ಯತೆಯನ್ನು ಈ ಗೀತೆಯು ತಿಳಿಸುತ್ತದೆ. ಸಮಾಜದ ಹಿತಕ್ಕಾಗಿ ಸ್ವ ಇಚ್ಛೆಯಿಂದ ಆತ್ಮಾರ್ಪಣೆ ಮಾಡಿಕೊಳ್ಳುವುದು 'ತ್ಯಾಗ'ವೆನಿಸಿದರೆ, ಸಾಯಲು ಇಷ್ಟವಿಲ್ಲದಿದ್ದರೂ ಮನೆ, ಸಮುದಾಯದ ಒತ್ತಡಕ್ಕೆ ಮಣಿದು ಸಾಯುವುದು 'ಬಲಿ' ಎನಿಸಿಕೊಳ್ಳುತ್ತದೆ.

'ಗೋವಿನ ಹಾಡು' ಕನ್ನಡ ನಾಡಿನ ಆಬಾಲವೃದ್ಧರಿಗೆ ಚಿರಪರಿಚಿತ, ಜನಪ್ರಿಯವಾಗಿರುವ ಕಥನಕವನವಾಗಿದೆ. ಈ ಹಾಡನ್ನು ರಚಿಸಿದ ಕವಿಯಾಗಲಿ, ಅವನ ಕಾಲವಾಗಲಿ ತಿಳಿದಿಲ್ಲ. ಪುಣ್ಯಕೋಟಿ ಮತ್ತು ಅದರ ಕರುವಿನ ಮಧ್ಯೆ



ನಡೆಯುವ ಸಂಭಾಷಣೆಯಲ್ಲಿ ಕರುಣ ರಸವು ಮಡುಗಟ್ಟಿದೆ. ಇಲ್ಲಿ ಹಸು ಸತ್ಯ, ಅಹಿಂಸೆಗಳಿಗೂ, ಹುಲಿಯು ಹಿಂಸೆ, ಕ್ರೌರ್ಯಗಳಿಗೂ ಸಂಕೇತವಾಗಿವೆ. ಕೊನೆಯಲ್ಲಿ ಬರುವ ಹುಲಿಯ ಸಾವು ಹಿಂಸೆಯ ಸಾವೇ ಆಗಿದೆ. ಸತ್ಯ, ಅಹಿಂಸೆಗಳ ಪ್ರಚಂಡ ಶಕ್ತಿಯು ಹೇಗೆ ಹೃದಯ ಪರಿವರ್ತನೆಯನ್ನು ಮಾಡಬಲ್ಲದು ಎಂಬುದನ್ನು ಪ್ರಸ್ತುತ ಕಥನ ಕವನವು ಸಾಬೀತುಪಡಿಸುತ್ತದೆ.

ಪ್ರಸ್ತುತ 'ಕೆರೆಗೆ ಹಾರ' ಮತ್ತು 'ಗೋವಿನ ಹಾಡು' ಗೀತೆಗಳನ್ನು ಬಿ.ಎಂ. ಶ್ರೀಕಂಠಯ್ಯ ಅವರು ಸಂಪಾದಿಸಿದ 'ಕನ್ನಡ ಬಾವುಟ' ಕೃತಿಯಿಂದ ಆಯ್ದುಕೊಳ್ಳಲಾಗಿದೆ.

■■

**ಘಟಕ–೨ : ವೈಚಾರಿಕತೆ**

ವೈಚಾರಿಕತೆ, ವಿಚಾರವಾದ ಇವೆಲ್ಲ ಒಂದೇ ಅರ್ಥವುಳ್ಳ ಪದಗಳು. ವೈಚಾರಿಕತೆ ಎಂದರೆ ಒಂದು ವಿಷಯವನ್ನು ವಿಮರ್ಶೆಯ ಒರೆಗಲ್ಲಿಗೆ ಹಚ್ಚಿ ಅದರ ಒಳಿತು ಕೆಡುಕುಗಳನ್ನು ಗುರುತಿಸಿ ಒಳಿತನ್ನು ಸ್ವೀಕರಿಸಿ, ಕೆಡುಕನ್ನು ಬಿಟ್ಟುಬಿಡುವ ಚಿಂತನಾಕ್ರಮ.

ಮಾನವ ಬುದ್ಧಿಜೀವಿ. ವಿಚಾರ ಶಕ್ತಿಯಿಂದ ಕೂಡಿರುವುದು ಮಾನವನ ಪ್ರಗತಿಯ ಶಸ್ತ್ರವಾಗಿದೆ. ಈ ವಿಚಾರ ಶಕ್ತಿ ಇರುವುದರಿಂದಲೇ ಮಾನವ ಉಳಿದ ಪ್ರಾಣಿಗಳಿಗಿಂತ ಭಿನ್ನವೆನಿಸಿಕೊಂಡಿದ್ದಾನೆ. ಆದಿ ಮಾನವನಿಂದ ಆಧುನಿಕ ಮಾನವನವರೆಗೆ ಮನುಕುಲ ಬೆಳೆದುಬಂದ ಬಗೆ ನೋಡಿದರೆ ವೈಚಾರಿಕತೆ ಮಾಡಿರುವ ಕೆಲಸದ ಅಗಾಧತೆ ಅರಿವಾಗುತ್ತದೆ. ಜ್ಞಾನ, ಪ್ರಜ್ಞೆ, ವೈಚಾರಿಕತೆಗಳು ಮಾನವನಲ್ಲಿರಬೇಕಾದ ಪ್ರಧಾನ ಅಂಶಗಳು. ಯಾವುದು ಚಿಂತನೆ, ಮನನಗಳಿಗೆ ಪ್ರೇರಣೆ ನೀಡುವುದೋ, ಚರ್ಚೆಗೆ ವಸ್ತುವಾಗುವುದೋ ಮತ್ತು ಯಾವುದು ನಮ್ಮ ತಿಳುವಳಿಕೆಗೆ ಹೊಸದೊಂದು ಆಯಾಮವನ್ನು ನೀಡಿ ಹೊಸ ಕ್ಷಿತಿಜಗಳನ್ನು ತೆರೆದು ತೋರಿಸುವುದೋ ಅದೇ ವೈಚಾರಿಕತೆ. ವೈಚಾರಿಕ ಪ್ರಜ್ಞೆ ಬೆಳೆಸಿಕೊಂಡಿರುವ ವ್ಯಕ್ತಿ ಯಾವುದೇ ವಿಷಯವನ್ನು ಒಂದೇ ಬಾರಿಗೆ ಒಪ್ಪಲಾರ. ಅದರ ನಿಜಾಂಶವನ್ನು ಅರಿತುಕೊಳ್ಳಲು ಅವನ ವಿಚಾರ ಶಕ್ತಿ ಶ್ರಮಿಸುತ್ತಿರುತ್ತದೆ. ಅವನ ಪ್ರಜ್ಞೆಗೆ ಒಪ್ಪಿತವಾದರೆ ಮಾತ್ರ ಲೋಕ ಅಲ್ಲಗಳೆದರೂ ಅವನು ತನ್ನ ಅಭಿಪ್ರಾಯವನ್ನು ಬದಲಿಸಲಾರ. ಗೆಲಿಲಿಯೋ, ಅರಿಸ್ಟಾಟಲ್ ಇದಕ್ಕೆ ಐತಿಹಾಸಿಕ ನಿದರ್ಶನಗಳು.

ವೈಚಾರಿಕತೆಯು ನಮ್ಮಲ್ಲಿ ಧೈರ್ಯವನ್ನು ತುಂಬಿ ಸಮರ್ಥರನ್ನಾಗಿ ಮಾಡುತ್ತದೆ. ಸ್ವತಂತ್ರ ಪ್ರವೃತ್ತಿ, ಸ್ವಾಭಿಮಾನ, ಸ್ವಾವಲಂಬನೆ ಬೆಳೆಯಲು ಸಹಾಯ ಮಾಡುತ್ತದೆ. ವೈಚಾರಿಕ ಪ್ರಜ್ಞೆಯು ಪ್ರತಿಯೊಂದನ್ನು ವಸ್ತುನಿಷ್ಠವಾಗಿ ಪ್ರಶ್ನೆಯ ಒರೆಗಲ್ಲಿನಲ್ಲಿ ತಿಕ್ಕಿ ನೋಡುವದರಿಂದ ಎಲ್ಲಾ ಕಂದಾಚಾರ, ಸಾಂಪ್ರದಾಯಿಕ ಮೌಢ್ಯಗಳನ್ನು ಹೋಗಲಾಡಿಸಲು ಪ್ರಬಲವಾದ ಸಾಧನದಂತೆ ಕೆಲಸ ಮಾಡುತ್ತದೆ.



# ೪. ಕಲ್ಕಿ

❖

**ಕುವೆಂಪು**

ನಿದ್ದೆಯ ಲೋಕದಿ ಕನಸಿನ ಬೀದಿ.
ತಿರುಗಿದೆ. ತೊಳಲಿದೆ, ತಪ್ಪಿತು ಹಾದಿ!
ಮುಂದೆ ಕಾಣಿಸಿತೊಂದು ಅರಣ್ಯ,
ಅನಂತವಾದುದು ವನ ವಿಸ್ತೀರ್ಣ.
ಹೆಮ್ಮರಗಳು ಕಿಕ್ಕಿರಿದುವು ಅಲ್ಲಿ,
ಬಿಡುವಿಲ್ಲದೆ ಹೆಣೆದಿದ್ದುವು ಬಳ್ಳಿ;
ಮುಳ್ಳಿನ ಪೊದೆಗಳು, ಗರಗಸವಳ್ಳಿ,
ಪ್ರೇತದಂತೆ ಪಾಪಾಸಿನ ಕಳ್ಳಿ!
        ನುಗ್ಗಿದೆ ನಾನಾ ಹಳುವಿನಲಿ;
        ಆ ಕನಸಿನ ಹೆಗ್ಗಾಡಿನಲಿ.
ಅಲ್ಲಿದ್ದುದು ಬೆಳಕೆಂಬುವುದಲ್ಲ.
        ಕತ್ತಲು ಅಲ್ಲ!
ಬೆಳಕೋ ಕತ್ತಲೋ ಶಿವನೇ ಬಲ್ಲ!
        ಶಿವನೇ ಬಲ್ಲ!
ಪ್ರೇತಗಳಂದದಿ ಭೀತಿಯ ಛಾಯೆ
        ಸುಳಿಸುಳಿದಾಡಿತು ಅಲ್ಲಿ,
        ಆ ಘೋರ ಕಾನನದಲ್ಲಿ!
ನಡೆದೇ ನಡೆದೇ ನಡೆದೂ ನಡೆದೆ,
ಸಾಹಸ ಬಿಡದೆ, ಎದೆಗೆಡದೆ.
        ಸುತ್ತಲೂ ಮೌನ!
        ಶ್ಮಶಾನ ಮೌನ!

ಕಾಡನು ದಾಟಿದೆ: ಮುಂಗಡೆ ಬೆಟ್ಟ;
ಶಿಖರವೊ ನಿಂತಿದೆ ಮುಗಿಲಿನ ಮುಟ್ಟ!
ಹತ್ತೀ ಹತ್ತೀ ಹತ್ತೀ ಹತ್ತಿ
ಕಡೆಯಲಿ ಸಿಕ್ಕಿತು ನಡುನೆತ್ತಿ!
ನೋಡಿದೆನಲ್ಲಿ
ನಡುನೆತ್ತಿಯಲಿ!
ಯಾವುದೋ ಊರು ಆ ಊರು?
ಬರಿ ಮಾಯದ ಊರು?
ಧನಿಕರ ಮನೆಗಳು ಒಂದೆಡೆ ನಿಂತಿವೆ,
ಜ್ಯೋತಿಯ ಮಣಿದೀಪಗಳಲ್ಲಿ;
ಕತ್ತಲು, ಕಗ್ಗತ್ತಲು ಇಲ್ಲಿ!
ಹಾದಿನ ನುಣ್ಣನೀಯತ್ತ,
ಗೋಳಿನ ನೀಳ್ದನಿಯಿತ್ತ.
ಕೂಳನು ಹೆಮ್ಮೆಗೆ ಬಿಸುಡುವರಲ್ಲಿ,
ಹೊಟ್ಟೆಗೆ ಇಲ್ಲದೆ ಕೊರಗುವರಿಲ್ಲಿ!
ಆ ಕಡೆ ಉದ್ಯಾನ,
ಈ ಕಡೆ ಶ್ಮಶಾನ!
ಪೀತಾಂಬರಗಳ ಹೊದೆಯುವರಲ್ಲಿ,
ಕೌಪೀನಕೆ ಚಿಂದಿಯು ಸಿಗದಿಲ್ಲಿ!
ನೋಡುತ ನೋಡುತ ನೋಡುತ್ತಿದ್ದೆ;
ನೋಡುತ್ತಿರೆಯಿರೆ ಬೆಚ್ಚಿ ಬಿದ್ದೆ;
ಬಡಬಗ್ಗರ ಜಠರಾಗ್ನಿಯು ಎದ್ದು
ಗುಡಿಸಲುಗಳಿಗೇ ಬೆಂಕಿಯು ಬಿದ್ದು
ಧಗಧಗ ಧಗಧಗ ಹೊತ್ತಿದುದು,
ಭುಗಿಭುಗಿಲೆನ್ನುತ ಮುತ್ತಿದುದು!
ಮುಗಿಲಿನ ವರೆಗೂ ಬಾನಿನ ವರೆಗೂ
ದುಕ್ಕು ದಿಕ್ಕುಗಳ ಜುಟ್ಟಿನ ವರೆಗೂ
ಬಡವರ ಬೆಂಕಿಯು ನಾಲಗೆ ಚಾಚಿ
ಶ್ರೀಮಂತರನಪ್ಪಿತು ಬಾಚಿ!



ಬಡವರ ಸಿಟ್ಟದು ಏನು ಪಿಶಾಚಿ?
ಬಡಬಾಗ್ನಿಯೆ ತಲೆತಗ್ಗಿತು ನಾಚಿ!
ಶ್ರೀಮಂತರ ಸೌಧಂಗಳ ನೆತ್ತಿ
ಸೀದುದು ಬಡಹೊಟ್ಟೆಯ ಉರಿಹೊತ್ತಿ!
ದೂರದ ಆ ಗಿರಿಶಿಖರದ ಮೇಲೆ
ನನಗೂ ತಟ್ಟಿತು ಬೆಂಕಿಯ ಜ್ವಾಲೆ!
ಕೇಳಿಸಿತೊಡನೆಯೆ ಹಾಹಾಕಾರ!
ಮಕ್ಕಳು ಮರಿಗಳ ಚೀತ್ಕಾರ!
ಗರ್ಭಿಣಿ ಸ್ತ್ರೀಯರು, ಬಾಣಂತಿಯರು,
ನವ ವಧುಗಳು ಮೇಣ್ ಶ್ರೀಮಂತೆಯರು;
ಹುಡುಗರು, ಮುದುಕರು, ಕುಂಟರು, ಕಿವುಡರು;
ಬಡವರ ಗೋಳನು ಕೇಳದ ಕಿವುಡರು;
ಹೊಟ್ಟೆಯಪಾಡಿಗೆ ಕಾವಿಯನುಟ್ಟು
ಬಡವರ ಹಸಿವೆಗೆ ಮೌಢ್ಯವ ಕೊಟ್ಟು
ಸುಖ ಸಂಪತ್ತನು ಕೊಂಡವರು,
ಮೃಷ್ಟಾನ್ನವನೇ ಉಂಡವರು;
ಗುರುಗಳು ಶಿಷ್ಯರು ಮನೆಗಳು ಮಠಗಳು
ಎಲ್ಲರು ಬೆಂದರು ಬಡಬಾಗ್ನಿಯಲಿ,
ಬಡವರ ಬಗ್ಗರ ಜಠರಾಗ್ನಿಯಲಿ!
ಬಡವನ ಜಠರಾಗ್ನಿಯೆ ಬಡಬಾಗ್ನಿ!
ಬಡವನೆ ಕಲಿಯುಗದಂತ್ಯದ ಕಲಿ!

ನೋಡುತಲಿದ್ದೆ;
ನೋಡುತಲಿದ್ದೆ!
ಕಣ್ಮರೆಯಾಯಿತು ಆ ದೃಶ್ಯ!
ಏನಿದು ಈ ದೃಶ್ಯ?
ರಕ್ತದ ಜಲಪಾತ!
ನರಮಾಂಸದ ನಾತ!
ಧುಮುಧುಮುಕುತಲಿದೆ ರಕ್ತದ ರಣಧುನಿ!

ಹೊರ ಹೊಮ್ಮುತ್ತಿದೆ ನರರಾರ್ತಧ್ವನಿ!
ಗಗನವು ರಕ್ತ! ಭೂಮಿಯು ರಕ್ತ!
ನೋಡಿದರೆತ್ತಲು ರಕ್ತ! ರಕ್ತ!
ಅಯ್ಯೋ ರಕ್ತ!
ಧುಮುಕುವ ಶೋಣಿತ ಗಿರಿಝರಿಯಲ್ಲಿ
ನರ ರುಂಡಗಳು
ನರ ಮುಂಡಗಳು
ಮುಂಗಾರ್ಗಾಲದ ಬಲ್ಸರಿಯಲ್ಲಿ
ಆಲಿಯ ಕಲ್ಲುಗಳುರುಳ್ವಂತೆ
ಧುಮುಕತಲಿರುವುವು! ಬಂಡೆಗಳಂತೆ
ದುಘುಂ ಧುಘುಂ ಧುಡುಮ್ಮನೆ ಬಿದ್ದು
ಹಾರುತಲಿವೆ ಬಿಸಿನೆತ್ತರು, ಸದ್ದು!
ಸುಂದರಿಯರ ತಲೆಮಂಡೆಗಳು,
ಶ್ರೀಮಂತರ ನೆಣದುಂಡೆಗಳು,
ಪಾಪದ ದೇಹ, ಪುಣ್ಯದ ದೇಹ,
ಗುಡಿಗೋಪುರಗಳು, ಧರ್ಮದ ಗೇಹ,
ತೇಲಿ, ತೇಲಿ, ತೇಲಿ, ತೇಲಿ
ನುಗ್ಗುತಲಿವೆ ಕಸಕಡ್ಡಿಯ ಹೋಲಿ!
ಯಾರವನಲ್ಲಿ? ದೂರದಲಿ,
ಧಾವಿಸಿ ಬರುವನು ಕ್ರೌರ್ಯದಲಿ!
ಅಸ್ಥಿಪಂಜರದಶ್ವವನೇರಿ,
ಬೆಳ್ಳಗೆ ಚಿಲಿಯುವ ದಾಡೆಯ ತೋರಿ,
ಅಸ್ಥಿಪಂಜರದಾಳವನು!
ಪ್ರೇತಸ್ವರೂಪಿ ಅದಾರವನು?
ಬಲಗಡೆ ಕೈಯಲಿ ಸಿಡಿಲಿನ ಬುತ್ತಿ!
ಎಲುಬಿನ ಕುದುರೆ! ಎಲುಬಿನ ಆಳು!
ಇವನೆಯೆ ಕಲ್ಕಿ? ಬಡವರ ಬಾಳು?
ಮೂರ್ತಿವೆತ್ತಿಹ ಬಡವರ ಗೋಳು!
ನೋಡುತಲಿದ್ದೆ,



ಕೇಳುತಲಿದ್ದೆ!
"ಹಸಿವೆ! ದಾಹಾ!" ಎನ್ನುತ ಬಂದು,
"ರಕ್ತಾ! ರಕ್ತಾ! ರಕ್ತಾ!" ಎಂದು
ನೆತ್ತರು ಹೊಳೆಯಲಿ ಧುಮುಕಿದನು,
ಕುದುರೆಯೊಡನೆ ಧುಮ್ಮಿಕ್ಕಿದನು!
ಕುಡಿದನು ರಕ್ತವ ಮೊಗೆಮೊಗೆದು,
ತಿಂದನು ತಲೆಗಳ ತೆಗೆತೆಗೆದು!
ಎಲುಬಿನ ಕುದುರೆಯು ಕೆನೆಯುತ್ತಿತ್ತು;
ನಾದವು ಬೊಮ್ಮವ ಬಿರಿವಂತಿತ್ತು!
ಎಲುಬಿನ ಮೂರ್ತಿಯು ಗಹಗಹಿಸಿತ್ತು;
ಗುಡುಗಿನ ಮಾಲೆಯೆ ಪೊರಮೊಡುತಿತ್ತು!
ಕುದುರೆಯು ಕುಡಿದೂ, ಆಳೂ ಕುಡಿದೂ,
ತಿಂದರು ಶವಗಳ ಲಠಿಲಠಿ ಕಡಿದೂ!
ಬತ್ತಿತು ರಣಧುನಿ: ಇನ್ನೂ ದಾಹ!
ಬಡವರ ಹೊಟ್ಟೆಯ ಬೆಂಕಿಯ ಹಸಿವೆ!
ತುಂಬದು ಹೊಟ್ಟೆ;
ತುಂಬದೋ ಹೊಟ್ಟೆ!.....
ಕೆಟ್ಟೇ! ಕೆಟ್ಟೇ!
ಅಯ್ಯೋ ಕೆಟ್ಟೇ!
ಕಲ್ಕಿ
ನೋಡಿದನೆನ್ನಂ ಬೆಟ್ಟದ ಮೇಲೆ!
ಬರುತಿಹನಯ್ಯೋ! ಒಲ್ಲೇ! ಒಲ್ಲೇ!
ನೋಡುತಲಿದ್ದೆ!
ಕಂಪಿಸಿ ಬಿದ್ದೆ!
"ಕಲ್ಕೀ! ಕಲ್ಕೀ!" ಎನ್ನುತ ಚೀರಿ
ಕನಸೊಡೆದೆದ್ದೆ!
ಇನ್ನೆಲ್ಲಿಯ ನಿದ್ದೆ?

* * *

**ಕವಿ ಪರಿಚಯ :**

ಕುವೆಂಪು (೧೯೦೪–೧೯೯೪) (ಕುಪ್ಪಳ್ಳಿ ವೆಂಕಟಪ್ಪ ಪುಟ್ಟಪ್ಪ) ಕನ್ನಡದ ಅಗ್ರಮಾನ್ಯ ಕವಿ, ಕಾದಂಬರಿಕಾರ, ನಾಟಕಕಾರ, ವಿಮರ್ಶಕ, ಚಿಂತಕ. ಇವರು ೨೯ನೆಯ ಡಿಸೆಂಬರ್ ೧೯೦೪ರಲ್ಲಿ ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿ ತಾಲೂಕಿನ ಹಿರೇಕೂಡಿಗೆಯಲ್ಲಿ ಜನಿಸಿದರು. ಕುಪ್ಪಳ್ಳಿಯಲ್ಲಿ ಬೆಳೆದರು. ಕುವೆಂಪು ಅವರು ಮಹಾರಾಜ ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿ, ಪ್ರಾಚಾರ್ಯರಾಗಿ, ವಿಭಾಗದ ಮುಖ್ಯಸ್ಥರಾಗಿ, ಮೈಸೂರು ವಿಶ್ವವಿದ್ಯಾಲಯದ ಕುಲಪತಿಗಳಾಗಿ ಸಲ್ಲಿಸಿದ ಸೇವೆ ಅವಿಸ್ಮರಣೀಯವಾಗಿದೆ.

ಕುವೆಂಪುರವರು ಕೊಳಲು, ನವಿಲು, ಪಾಂಚಜನ್ಯ, ಕೃತ್ತಿಕೆ, ಚಂದ್ರಮಂಚಕೆ ಬಾ ಚಕೋರಿ, ಪಕ್ಷಿಕಾಶಿ, ಪ್ರೇಮಕಾಶ್ಮೀರ, ಗೀತಾಂಜಲಿ, ಕೋಗಿಲೆ ಮತ್ತು ಸೋವಿಯತ್ ರಷ್ಯಾ ಮುಂತಾದವು ಇವರ ಕವನ ಸಂಕಲನಗಳು. ಜಲಗಾರ, ಶೂದ್ರ ತಪಸ್ವಿ, ರಕ್ತಾಕ್ಷಿ, ಬೆರಳ್ಗೆ ಕೊರಳ್, ಸ್ಮಶಾನ ಕುರುಕ್ಷೇತ್ರ ಮೊದಲಾದವು ಅವರ ಪ್ರಸಿದ್ಧ ನಾಟಕಗಳು. ಕಾನೂರು ಹೆಗ್ಗಡತಿ, ಮಲೆಗಳಲ್ಲಿ ಮದುಮಗಳು ಇವರು ಬರೆದಿರುವ ಮಹತ್ವದ ಕಾದಂಬರಿಗಳು. ಮನುಜಮತ, ವಿಶ್ವಪಥ, ವಿಚಾರಕ್ರಾಂತಿಗೆ ಆಹ್ವಾನ, ಜನತಾಪ್ರಜ್ಞೆ ಮತ್ತು ವೈಚಾರಿಕ ಜಾಗೃತಿ–ಇವು ಇವರ ವೈಚಾರಿಕ ಬರಹಗಳು. ಕಾವ್ಯ ವಿಹಾರ, ವಿಭೂತಿಪೂಜೆ, ರಸೋವೈಸಃ, ದ್ರೌಪದಿಯ ಶ್ರೀಮುಡಿ–ಇವು ವಿಮರ್ಶಾ ಕೃತಿಗಳು. ನೆನಪಿನ ದೋಣಿಯಲ್ಲಿ ಇವರ ಆತ್ಮಕಥೆ. ಸ್ವಾಮಿ ವಿವೇಕಾನಂದ, ಶ್ರೀ ರಾಮಕೃಷ್ಣ ಪರಮಹಂಸ ಇವು ಜೀವನ ಚರಿತ್ರೆಗಳು. ಚಿತ್ರಾಂಗದ ಎಂಬ ಹೆಸರಿನ ಖಂಡಕಾವ್ಯವನ್ನು, ಶ್ರೀ ರಾಮಾಯಣ ದರ್ಶನಂ ಎನ್ನುವ ಮಹಾಕಾವ್ಯವನ್ನು, ಮಕ್ಕಳಿಗಾಗಿ ಬೊಮ್ಮನಹಳ್ಳಿಯ ಕಿಂದರಿಜೋಗಿ ಮೊದಲಾದ ಪ್ರಮುಖ ಕೃತಿಗಳನ್ನು ರಚಿಸಿದ್ದಾರೆ.

ಕುವೆಂಪು ಅವರು ೧೯೫೮ರಲ್ಲಿ ಪದ್ಮಭೂಷಣ ಪ್ರಶಸ್ತಿ ಪಡೆದರು. ೧೯೫೭ರ ೩೯ನೆ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ಸರ್ವಾಧ್ಯಕ್ಷರಾಗಿದ್ದರು. ೧೯೬೪ರಲ್ಲಿ ರಾಷ್ಟ್ರಕವಿ ಪ್ರಶಸ್ತಿ, ೧೯೫೫ರಲ್ಲಿ ಕೇಂದ್ರ ಸಾಹಿತ್ಯ ಅಕಾದೆಮಿ ಬಹುಮಾನ, ೧೯೬೮ರಲ್ಲಿ ಜ್ಞಾನಪೀಠ ಪ್ರಶಸ್ತಿ, ಕರ್ನಾಟಕ ಸರಕಾರದ ಮೊದಲ ಪಂಪ ಪ್ರಶಸ್ತಿ, ಮೊದಲ ಕರ್ನಾಟಕ ರತ್ನ ಪ್ರಶಸ್ತಿಗಳನ್ನು ಪಡೆದವರಾಗಿದ್ದಾರೆ. ಪ್ರಸ್ತುತ ಪದ್ಯಭಾಗವನ್ನು ಕುವೆಂಪು ಅವರ ಪಾಂಚಜನ್ಯ ಕೃತಿಯಿಂದ ಆಯ್ದುಕೊಳ್ಳಲಾಗಿದೆ.



**ಕಾವ್ಯದ ಆಶಯ :**

ಕಲ್ಕಿ ಒಂದು ದೃಶ್ಯ ಕಾವ್ಯ. ಕುವೆಂಪುರವರು ಮೂವತ್ತರ ದಶಕದಲ್ಲಿ ಬರೆದ ದೀರ್ಘ ಪದ್ಯ. ಕವಿ ಕನಸಿನಲ್ಲಿ ಒಂದು ದಿನ ಕಾಡಿನ ಮಧ್ಯೆ ಬೆಟ್ಟದ ಮೇಲಿನ ಊರಿಗೆ ಹೋಗುತ್ತಾರೆ. ಅಲ್ಲಿ ಬಡವರ ಶ್ರೀಮಂತರ ನಡುವಿನ ಅಸಮಾನತೆಯನ್ನು ಕಾಣುತ್ತಾರೆ. ಉಳ್ಳವರ ದರ್ಪ, ಅಹಂಕಾರದ ಜೊತೆಯಲ್ಲಿಯೇ ಬಡವರ ಆರ್ತನಾದದ, ದೀನ ಸ್ಥಿತಿಯ ಕರಾಳ ದರ್ಶನ ಮಾಡಿಸುತ್ತಾರೆ. ನೋಡ ನೋಡುತ್ತಿದ್ದಂತೆಯೇ ಬಡವರ ಜಠರಾಗ್ನಿಯು ಎದ್ದು ಬಡವ ಬಲ್ಲಿದರೆನ್ನದೇ ಎಲ್ಲರನೂ ನುಂಗಿ ನೊಣೆಯುತ್ತದೆ. ಬಡವರ ಹೊಟ್ಟೆಯ ಬೆಂಕಿಯೇ ಕಲಿಯುಗದ ಅಂತ್ಯದ ಕಲ್ಕಿಯಾಗಿ ಸರ್ವವನೂ ಆಪೋಷಣ ತೆಗೆದುಕೊಳ್ಳುವ ಭೀಕರ ಚಿತ್ರಣ ಇಲ್ಲಿದೆ. ಇಲ್ಲಿ ಕಲ್ಕಿಯು ಕ್ರೌರ್ಯದ ಪ್ರತಿರೂಪ. ರಕ್ತದ ಜಲಪಾತದಲಿ, ಅಸ್ಥಿಪಂಜರದ ಅಶ್ವವನೇರಿ ಬೆಳ್ಳಗೆ ಚಿಲಿಯುವ ದಾಡೆಯ ತೋರಿ, ಮಿಂಚಿನ ಕತ್ತಿಯನ್ನು ಸಿಡಿಲಿನ ಬುತ್ತಿಯನ್ನೂ ಹಿಡಿದು ಭೀಭತ್ಸ, ಆಕ್ರೋಶದ ಮೂರ್ತರೂಪವಾಗುತ್ತಾನೆ. ಅವನ ಬತ್ತದ ರಣಹಸಿವು, ರಣದಾಹ ಅಸಮಾನತೆಯನ್ನು ತಡೆಯುವವರೆಗೂ ನಿಲ್ಲಲಾರವು.

ಪಾಪದ ದೇಹ, ಪುಣ್ಯದ ದೇಹ ಗುಡಿಗೋಪುರಗಳೂ ಧರ್ಮದ ಗೇಹ ಎಲ್ಲವೂ ಸಹ ಕೊಚ್ಚಿಹೋಗುತ್ತದೆ. ಕಲ್ಕಿ ಇಲ್ಲಿ ಪ್ರಳಯರೂಪಿಯಾಗಿ ಕಾಣಿಸುತ್ತಾನೆ. ಅಲ್ಲಿದ್ದೆಲ್ಲವನ್ನೂ ಸಂಹರಿಸಿದ ಮೇಲೂ ಅವನ ಹಸಿವೆ, ದಾಹಗಳು ಇಂಗದೇ ಇದ್ದಾಗ ಕವಿಯ ಕಡೆಗೂ ಧಾವಿಸಿ ಬಂದಾಗ ಕಲ್ಕೀ ಎನ್ನುತಾ ಚೀರಿ ಕನಸೊಡೆದು ಎದ್ದು "..ಇನ್ನೆಲ್ಲಿಯ ನಿದ್ದೆ" ಎಂದು ಪ್ರಶ್ನಿಸುತ್ತಾರೆ. ಈ ಪ್ರಶ್ನೆ ಅಸಮಾನತೆಯ ಸಮಾಜಕ್ಕೆ ಹಾಕಿದ ಪ್ರಶ್ನೆಯಾಗಿದೆ. ನೆಮ್ಮದಿಯಿಂದ ನಿದ್ರಿಸುವ ಕಾಲ ಈಗಿಲ್ಲ. ತೂಕಡಿಸದೇ ಎಚ್ಚರವಿರಲೇಬೇಕಾದ ಅನಿವಾರ್ಯತೆ ಇದೆ ಎನ್ನುತ್ತಾರೆ. ನನ್ನ ಪ್ರಕಾರ ಈ ಒಂದು ಸಾಲು ದೀರ್ಘ ಪದ್ಯಕ್ಕೆ ದಿಕ್ಸೂಚಿ. ಕುವೆಂಪುರವರ ಕಲ್ಪನೆಯ ಕ್ರೂರ, ಭೀಕರ ಕಲ್ಕಿ ಬರದೇ ಇದ್ದರೂ ಅಸಮಾನತೆಯನ್ನು ತೊಡೆದುಹಾಕಲು ಪ್ರತಿಯೊಬ್ಬರ ಮನದಲ್ಲೂ ಒಬ್ಬೊಬ್ಬ ಸಮಾನತೆಯ ಕಲ್ಕಿ ಉದಯವಾಗಿ ತನ್ಮೂಲಕ ವಿಶ್ವಮಾನವತೆಯ ಬಳಿಗೆ ಸಾಗುವಂತೆ ಆಶಿಸುತ್ತಾರೆ. ಈ ಪದ್ಯವು ವರ್ಗ ಸಂಘರ್ಷಕ್ಕೆ ಹಚ್ಚಿದ ಕಿಚ್ಚಿನಂತಿದೆ.

■■

# ೫. ವಚನಕಾರರ ವಿಚಾರ ಕ್ರಾಂತಿ



**ಜಿ.ಎಸ್.ಶಿವರುದ್ರಪ್ಪ**

ಯಾವ ಯಾವ ಜಡ್ಡುಗಟ್ಟಿದ ಕಾಲಗಳಲ್ಲಿ, ಸೂಕ್ಷ್ಮ ಸಂವೇದನೆ ಉಳ್ಳವರೂ, ವಿಚಾರವಂತರೂ ಆದ ಕೆಲವೇ ಜನ ತಮ್ಮ ಸುತ್ತಣ ಪರಿಸ್ಥಿತಿಯನ್ನೂ ಮತ್ತು ಅದನ್ನು ನಿಯಂತ್ರಿಸಿಕೊಂಡು ಬಂದ ರೂಢಿಗತವಾದ ವ್ಯವಸ್ಥೆ ಹಾಗೂ ಸಂಪ್ರದಾಯಗಳನ್ನೂ ಪ್ರಶ್ನಿಸಲು ತೊಡಗುತ್ತಾರೋ, ಪ್ರತಿಭಟಿಸಲು ತೊಡಗುತ್ತಾರೋ ಅಂತಹ ಕಾಲಗಳನ್ನು ಸಂಕ್ರಮಣ ಕಾಲಗಳೆಂದು ಕರೆಯಬಹುದು. ಕನ್ನಡ ನಾಡಿನ ಸಾಂಸ್ಕೃತಿಕ ಇತಿಹಾಸದಲ್ಲಿ ಹನ್ನೆರಡನೆಯ ಶತಮಾನ ಇಂತಹ ಒಂದು ಸಂಕ್ರಮಣ ಕಾಲ. ಈ ಸಂಕ್ರಮಣದ ಮುಖ್ಯ ಪ್ರೇರಣೆ ವೀರಶೈವ ಧರ್ಮ; ಅದರ ಪರಿಣಾಮ ಒಂದು ಧಾರ್ಮಿಕ, ಸಾಮಾಜಿಕ, ಸಾಹಿತ್ಯಿಕ ವಿಚಾರ ಕ್ರಾಂತಿ.

ಈ ಕ್ರಾಂತಿಯಲ್ಲಿ ರಭಸ, ಆವೇಶ, ಪ್ರತಿಪಕ್ಷಗಳ ದಮನ ಮನೋಭಾವ, ಸ್ವಮತ ಪ್ರತಿಷ್ಠೆ, ವಿಡಂಬನೆ ಇತ್ಯಾದಿಗಳು ಇರುವುದು ತೀರ ಸಹಜ. ಆದರೆ, ಈ ಕ್ರಾಂತಿಗೆ ಅತ್ಯಂತ ಅಗತ್ಯವಾದ ವಿಚಾರ ಮೂಲವಾದ ವಿಮರ್ಶನ ಪ್ರಜ್ಞೆಯೊಂದು ವಿಶೇಷ ಪ್ರಮಾಣದಲ್ಲಿ ಹಿನ್ನೆಲೆಯಾಗಿತ್ತೆಂಬ ಅಂಶವನ್ನು, ಇಂದು ನಾವು ಮರೆಯಬಾರದು.

ವಚನಕಾರರರು ಅಥವಾ ಶಿವಶರಣರು ಮೂಲತಃ ನಿಷ್ಠುರ ವಿಮರ್ಶಕರು. ಪರಂಪರೆಯನ್ನು ಕುರಿತು, ಧರ್ಮವನ್ನು ಕುರಿತು, ದೇವರನ್ನು ಕುರಿತು, ತಮ್ಮ ಸುತ್ತಣ ಸಾಮಾಜಿಕ ಪರಿಸರವನ್ನು ಕುರಿತು, ಎಲ್ಲಕ್ಕೂ ಮಿಗಿಲಾಗಿ ತಮ್ಮನ್ನೇ ಕುರಿತು ವಸ್ತುನಿಷ್ಠವಾಗಿ ವಿಮರ್ಶೆ ಮಾಡಿದವರು. ಈ ವಿಮರ್ಶೆ ವೈಯಕ್ತಿಕವಾಗಿ ಹಾಗೂ ಸಾಮೂಹಿಕವಾಗಿ ಕೂಡಾ ನಡೆದಂತೆ ತೋರುತ್ತದೆ. ಶರಣರೆಲ್ಲರೂ ಶಿವಾನುಭವ ಗೋಷ್ಠಿಗಳಲ್ಲಿ ಕುಳಿತು ಚರ್ಚೆ ಮಾಡುತ್ತಿದ್ದರೆಂಬ ಸಂಗತಿ ಈ ಮಾತಿಗೆ ನಿದರ್ಶನವಾಗಿದೆ.



ಹೀಗೆ ಕೂತು ವಿಚಾರ ಮಾಡಿದವರು ಪಂಡಿತರಲ್ಲ; ಉತ್ತಮ ಜಾತಿಯಲ್ಲಿ ಹುಟ್ಟಿದರೆ ಮಾತ್ರ ವಿಚಾರ ಮಾಡುವ ಸಾಮರ್ಥ್ಯವಿರುತ್ತದೆ ಎಂಬ ಭ್ರಮೆಗೆ ಒಳಗಾದವರಲ್ಲ; ತಮ್ಮ ವೈಚಾರಿಕತೆಯಿಂದ ತಾವೆಂತಹ ಕ್ರಾಂತಿಯನ್ನು ಮಾಡುತ್ತಿದ್ದೇವೆ ಎನ್ನುವದನ್ನೂ ಬಲ್ಲವರಲ್ಲ; ಅಂತಹ ಸಾಮಾನ್ಯ ಜನ, ಗಂಡೆನ್ನದೆ, ಹೆಣ್ಣೆನ್ನದೆ, ಆ ಜಾತಿ ಈ ಜಾತಿ ಎನ್ನದೆ, ಬಸವಣ್ಣನವರ ವ್ಯಕ್ತಿ ಕೇಂದ್ರದಲ್ಲಿ ಸಂಘಟಿತರಾಗಿ 'ತಮಂಧ ಘನ'ವಾದ ಅಂದಿನ ಆವರಣದಲ್ಲಿ ಒಂದು ವಿಚಾರದ ದೀಪಾವಳಿಯನ್ನೇ ತೆರೆದರು.

ವಚನಕಾರರ ವೈಚಾರಿಕತೆಯಲ್ಲಿ ಬಹು ಮುಖ್ಯವಾದ ಸಂಗತಿ ಎಂದರೆ, ಪರಂಪರಾಗತವಾದ ವೈಚಾರಿಕತೆಗೆ ಹಿನ್ನೆಲೆಯಾಗಿದ್ದ ವೇದ ಶಾಸ್ತ್ರ ಆಗಮಗಳನ್ನು ನಿರಾಕರಿಸಿದ್ದು. ಶತಶತಮಾನಗಳಿಂದ, ಜೈನ ಹಾಗೂ ಬೌದ್ಧ ಧರ್ಮಗಳನ್ನು ಬಿಟ್ಟರೆ, ಈ ದೇಶದಲ್ಲಿ ಹಿಂದೂ ಧರ್ಮದ ಆಚಾರ್ಯರುಗಳು ಮಾಡಿದ ಕೆಲಸವೆಂದರೆ, ಅದೇ ವೇದೋಪನಿಷಾದಾದಿಗಳಿಗೆ ಕಾಲಕಾಲಕ್ಕೆ ಭಾಷ್ಯವನ್ನು ಬರೆದದ್ದು. ಪ್ರತಿಯೊಂದಕ್ಕೂ ವೇದ ಪ್ರಾಮಾಣ್ಯವನ್ನೇ ಎತ್ತಿ ಹಿಡಿಯುವ ಈ ಆಚಾರ್ಯರುಗಳಿಂದ, ಅಂತಹ ಮೂಲಭೂತವಾದ ಕ್ರಾಂತಿಯೇನೂ ಆಗದೆ ಹೋದುದಕ್ಕೆ, ಇದೇ ಮುಖ್ಯ ಕಾರಣವೆನ್ನಬಹುದು. ಸ್ವತಂತ್ರವಾದ ವಿಚಾರಶಕ್ತಿಯನ್ನು ಬೆಳೆಯಿಸಿಕೊಳ್ಳುವವರು ಮಾಡುವ ಮೊದಲ ಕೆಲಸವೆಂದರೆ, ಯಾವ ವೈಚಾರಿಕ ಸಿದ್ಧ ಸಂಪ್ರದಾಯದಲ್ಲಿ ನಿಂತು, ಅದುವರೆಗೂ ಎಲ್ಲರೂ ಯೋಚನೆ ಮಾಡುತ್ತಾ ಬಂದಿದ್ದಾರೋ, ಅದನ್ನು, ಅದರ ಪ್ರಭಾವವನ್ನೂ, ನಿರಾಕರಿಸಿ ತಮ್ಮದೇ ಆದ ನೆಲೆಯಲ್ಲಿ ನಿಲ್ಲುವುದು. ಯಾಕೆಂದರೆ ನಿಜವಾದ ವೈಚಾರಿಕತೆ, ಇಂತಹ ಪೂರ್ವ ಸಿದ್ಧವಾದ ನಿಯಂತ್ರಣಕ್ಕೆ ಒಳಗಾದರೆ, ಅದು ವಿಚಾರವಂತಿಕೆಯೆಂದು ಅನಿಸಿಕೊಳ್ಳಲಾರದು. ಆದರೆ, ಹೀಗೆ ನಿರಾಕರಿಸುವಾಗ ಅಂಥವರಿಗೆ, ತಮಗೆ ಹಿಂದಿನ ವಿಚಾರ ಪರಂಪರೆಯ ಅರಿವಿರಬಾರದು ಎಂದಲ್ಲ; ಅದರ ಬಗ್ಗೆ ಗೌರವವಿರುವದಿಲ್ಲ ಎಂದು ಅಲ್ಲ. ಕೇವಲ ತಿರಸ್ಕಾರದ ಮನೋಧರ್ಮದಿಂದ ಯಾರೂ ವಿಚಾರವಾದಿಗಳೆನಿಸಿಕೊಳ್ಳುವದಿಲ್ಲ. ವಚನಕಾರರಿಗೆ ಹಿಂದಿನ ವೇದಶಾಸ್ತ್ರ ಪುರಾಣಗಳ ಪರಿಚಯ ತಕ್ಕಮಟ್ಟಿಗೆ ಇತ್ತು; ಮತ್ತು ಅದು ಈ ದೇಶದ ಸಾಮಾಜಿಕ ಜೀವನದಲ್ಲಿ ತಂದ ಏರುಪೇರುಗಳೇನು, ಅದರ ದೋಷಗಳು, ಇತಿಮಿತಿಗಳು ಏನು ಎಂಬುದನ್ನೂ ಬಲ್ಲವರಾಗಿದ್ದರು. ಆದುದರಿಂದಲೇ ವಿಚಾರಪೂರ್ವಕವಾಗಿ ಅವುಗಳನ್ನು ನಿರಾಕರಿಸಿದರು ಮತ್ತು ವೇದ ಶಾಸ್ತ್ರಗಳ ಮಾತಿಗಿಂತ, ತಮ್ಮ ಸುತ್ತಣ ಪರಿಸರದಲ್ಲಿ ಯಾವುದೂ ಸ್ವಂತ ಅನುಭವಕ್ಕೆ ಬರುತ್ತದೋ, ಆ ಸ್ವಾನುಭವವೇ ಎಲ್ಲದಕ್ಕಿಂತ ಮಿಗಿಲಾದದ್ದು ಎಂಬುದನ್ನು ಕಂಡುಕೊಂಡರು. ಆದುದರಿಂದಲೇ–

ವೇದಕ್ಕೆ ಒರೆಯ ಕಟ್ಟುವೆ. ಶಾಸ್ತ್ರಕ್ಕೆ ನಿಗಳವನ್ನಿಕ್ಕುವೆ,
ತರ್ಕದ ಬೆನ್ನ ಬಾರನೆತ್ತುವೆ, ಆಗಮದ ಮೂಗ ಕೊಯ್ಯುವೆ
ನೋಡಯ್ಯ

ಎಂದು ಬಸವಣ್ಣನವರು ಸವಾಲು ಹಾಕಿದರು.

ವೇದಶಾಸ್ತ್ರ ಪುರಾಣಾಗಮಗಳೆಂಬ
ಕೊಟ್ಟಣವ ಕುಟ್ಟುತ್ತ ನುಚ್ಚು ತೌಡು ಕಾಣಿರೋ

ಎಂದು ಅಕ್ಕಮಹಾದೇವಿ, ಅವುಗಳ ನಿರರ್ಥಕತೆಯನ್ನು ಘೋಷಿಸಿದಳು. 'ವೇದವನೋದಿದರೇನು, ಶಾಸ್ತ್ರವ ಕೇಳಿದರೇನು' ಎಂಬುದೇ ಈ ವಚನಕಾರರ ಮುಖ್ಯ ಧೋರಣೆಯಾಯಿತು. ವೇದೋಕ್ತವಾದ ಹಿಂದೂ ಧರ್ಮ, ತನ್ನ ವರ್ಣ ವ್ಯವಸ್ಥೆಯಿಂದ ವ್ಯಕ್ತಿಗಳಲ್ಲಿ ಶ್ರೇಷ್ಠ ಕನಿಷ್ಠರೆಂಬ ತಾರತಮ್ಯವನ್ನು ಕಲ್ಪಿಸುತ್ತಾ, ಯಜ್ಞಯಾಗಾದಿಗಳಿಂದ ಪ್ರಾಣಿವಧೆಯನ್ನು ಸಮರ್ಥಿಸುತ್ತಾ, 'ಸರ್ವಂ ಖಲ್ವಿದಂ ಬ್ರಹ್ಮಾ' ಎಂದು ಉದ್ಘೋಷಿಸುವುದು ಎಷ್ಟು ವಿಲಕ್ಷಣ ಎಂದು ವಚನಕಾರರಿಗೆ ತೋರಿರಬಹುದು. ಅಲ್ಲದೆ ವ್ಯಕ್ತಿಯ ಆಧ್ಯಾತ್ಮಿಕಾನುಭವ ಎನ್ನುವುದು, ವೈಯಕ್ತಿಕ ಸಾಧನೆಯಿಂದ, ಶ್ರದ್ಧೆ-ನಿಷ್ಠೆ-ಸ್ವಾತ್ಮ ಪರಿಶೀಲನೆಗಳಿಂದ ಲಭಿಸತಕ್ಕದ್ದೆ ಹೊರತು, ವೇದಶಾಸ್ತ್ರಗಳ ಪಠನದಿಂದ ಪರಂಪರಾಗತವಾದ ವಿಚಾರಗಳನ್ನು ನಂಬಿಕೆಗಳನ್ನು ಒಪ್ಪಿಕೊಳ್ಳುವುದರಿಂದ ಬರುವುದಲ್ಲ ಎನ್ನುವುದನ್ನು ಇವರು ಕಂಡುಕೊಂಡರು. 'ಅನುಭಾವ' ಅಥವಾ ಆಧ್ಯಾತ್ಮಿಕ ಅನುಭವ ಎನ್ನುವುದು 'ಅಂತರಂಗದ ರತ್ನ ಕಾಣಿರೋ' ಎಂದು ವಚನಕಾರರು ಹೇಳಿದ್ದು ಇದೇ ಅರ್ಥದಲ್ಲಿಯೇ.

ಸನ್ಯಾಸ, ತಪಸ್ಸು ಇವುಗಳೇ ಆಧ್ಯಾತ್ಮಿಕ ಸಾಧನೆಗೆ ಇರುವ ದಾರಿ ಎಂಬ ಪರಂಪರಾಗತವಾದ ಭಾವನೆಯನ್ನು ಶಿವಶರಣರು ಪುನರ್ವಿಮರ್ಶೆ ಮಾಡಿ, ಅವುಗಳ ಅರ್ಥವನ್ನು ಪರಿಷ್ಕಾರ ಮಾಡಿದ್ದು ಈ ವೈಚಾರಿಕತೆಯ ಇನ್ನೊಂದು ನಿದರ್ಶನ. 'ಸನ್ಯಾಸ' ಎಂದರೆ ಹೆಂಡತಿ ಮಕ್ಕಳನ್ನು ತೊರೆದು, ಕಾಡಿಗೆ ಹೋಗಿ, ಗೆಡ್ಡೆ ಗೆಣಸುಗಳನ್ನು ತಿಂದು, ಒಮ್ಮೊಮ್ಮೆ ಅದೂ ಇಲ್ಲದೆ, ಶರೀರವನ್ನು ದಂಡಿಸುವುದು ಎಂಬ ಭಾವನೆ, ಮುಖ್ಯವಾಗಿ ಬೌದ್ಧ ಹಾಗೂ ಜೈನ ಧರ್ಮಗಳಿಂದಾಗಿ ಪ್ರಚಲಿತವಾಗಿತ್ತು. ಜೈನರು ತಪಸ್ಸಿನ ಹೆಸರಿನಲ್ಲಿ ಮಾಡಿಕೊಳ್ಳುವ ಕೇಶಲುಂಛನ, ಪರಿಷಹಗಳ ಜಯ-ಇತ್ಯಾದಿಗಳಿಂದ, ಸನ್ಯಾಸವೆಂದರೆ ಸಾಮಾನ್ಯರಲ್ಲಿ ಒಂದು ರೀತಿಯ ಭಯವೇ ಹುಟ್ಟಿಕೊಂಡಿದ್ದರೆ ಆಶ್ಚರ್ಯವಿಲ್ಲ. ವಚನಕಾರರ ಪ್ರಕಾರ ಸನ್ಯಾಸ ಎನ್ನುವುದು, ಸಂಸಾರಕ್ಕೆ ವಿರುದ್ಧವಾದುದಲ್ಲ ಮತ್ತು ಕಾಡಿಗೆ ಹೋಗಿ



ದೇಹದಂಡನೆ ಮಾಡಿಕೊಳ್ಳುವುದೂ ಅಲ್ಲ. ಅದು ಒಂದು ಚಿತ್ತದ ಸಮಾಧಾನ ಸ್ಥಿತಿಯನ್ನು ಸಾಧಿಸುವ ವಿಧಾನ. ಅದಕ್ಕೆ ಕಾಡಿಗೆ ಓಡಬೇಕಾಗಿಲ್ಲ-

ಮಠವೇಕೋ ಪರ್ವತವೇಕೋ
ಜನವೇಕೋ ನಿರ್ಜನವೇಕೋ
ಚಿತ್ತಸಮಾಧಾನ ಉಳ್ಳ ಶರಣಂಗೆ?

ಎನ್ನುವುದು ಈ ವೈಚಾರಿಕತೆಯ ಪ್ರಶ್ನೆ. ತಪಸ್ಸಿನ ಹೆಸರಿನಲ್ಲಿ ದೇಹದಂಡನೆ ಮಾಡುವವರನ್ನು ಕುರಿತು 'ಹುತ್ತವ ಬಡಿದಡೆ ಹಾವು ಸಾಯಬಲ್ಲುದೆ ಅಯ್ಯ?' ಎಂದು ಬಸವಣ್ಣನವರು ಕೇಳುತ್ತಾರೆ. ದೇಹದಂಡನೆ ಎಂಬುದು ಕೇವಲ ಹುತ್ತವನ್ನು ಬಡಿಯುವ ವ್ಯರ್ಥ ಪ್ರಯತ್ನ; ಒಳಗಿನ ವಿಷ ತುಂಬಿಕೊಂಡ ಹಾವು ಇದ್ದ ಹಾಗೇ ಇರುತ್ತದೆ. ಆದುದರಿಂದ ಇದ್ದಲ್ಲೇ ಇದ್ದು ಮನಸ್ಸನ್ನು ಹದಗೊಳಿಸುವುದೇ ನಿಜವಾದ ಸನ್ಯಾಸ, ಆಧ್ಯಾತ್ಮಿಕ ಸಾಧನೆ. ಇದಕ್ಕಾಗಿ ಸಂಸಾರವನ್ನಾಗಲಿ, ಗೃಹಸ್ಥಧರ್ಮವನ್ನಾಗಲಿ ಬಿಡಬೇಕಾಗಿಲ್ಲ. ಜೇಡರ ದಾಸಿಮಯ್ಯ ಹೇಳುತ್ತಾನೆ. 'ಸತಿ-ಪತಿಗಳೊಂದಾದ ಭಕ್ತಿ ಹಿತವಾಗಿಪ್ಪುದು ಶಿವಂಗೆ' ಎಂದು, 'ಹಾವಿನ ಬಾಯ ಹಲ್ಲ ಕಳೆದು ಹಾವನಾಡಿಸಬಲ್ಲಡೆ ಹಾವಿನ ಸಂಗವೇ ಲೇಸು ಕಂಡಯ್ಯ!' ಎನ್ನುತ್ತಾಳೆ ಅಕ್ಕಮಹಾದೇವಿ. ಈ ಸಂಸಾರವೆಂಬುದು ಹಾವು ನಿಜ. ಆದರೆ, ಕಳೆಯಬೇಕಾದದ್ದು ಹಾವನ್ನಲ್ಲ, ಅದರ ಹಲ್ಲನ್ನು. ಈ ಹಾವಿನ ಬಾಯ ವಿಷದ ಹಲ್ಲನ್ನು ತೆಗೆದು, ಬೇಕಾದ ಹಾಗೆ ಅದರ ಜತೆ ಇರಬಹುದು. ಸಂಸಾರದಲ್ಲಿನ, ಸ್ವಾರ್ಥ ಮೋಹಗಳ ಹಲ್ಲನ್ನು ತೆಗೆಯುವ, ಅದನ್ನು ಪಳಗಿಸುವ ಕೌಶಲವೇ ನಿಜವಾದ ತಪಸ್ಸು. ಹೀಗೆ ಸಂಸಾರವನ್ನೂ, ಸನ್ಯಾಸವನ್ನೂ, ಸಮನ್ವಯಗೊಳಿಸುವ ಈ ವೈಚಾರಿಕತೆಯಲ್ಲಿ ಇನ್ನೊಂದು ಮುಖ್ಯವಾದ ಮಾತೆಂದರೆ, ಸ್ತ್ರೀಯರು ತಪಸ್ಸಿಗೆ ವಿಘ್ನಕಾರಿಯಲ್ಲ ಮತ್ತು ಅವರಿಗೆ ಆಧ್ಯಾತ್ಮಿಕ ಸಾಧನೆಯಲ್ಲಿ ಗಂಡಸಿಗಿರುವಷ್ಟೇ ಸ್ವಾತಂತ್ರ್ಯವಿದೆ ಎನ್ನುವುದು. ವೈದಿಕ, ಜೈನ, ಬೌದ್ಧ ಮತಗಳು ಸ್ತ್ರೀಯರು ಪುರುಷರಷ್ಟೇ ಸಮಾನ ಎಂದು ಒಪ್ಪುವುದಿಲ್ಲ. ವೈದಿಕ ಧರ್ಮದ ಪ್ರಕಾರ ಸ್ತ್ರೀಯರಿಗೆ ವೇದಾಧಿಕಾರವಿಲ್ಲ; ಪುರುಷರಂತೆ ಜನಿವಾರವನ್ನು ಧರಿಸುವ ಹಕ್ಕಿಲ್ಲ. ಬೌದ್ಧ ಧರ್ಮವಂತೂ ಮೊದಮೊದಲು ಸ್ತ್ರೀಯರಿಗೆ ಪ್ರವೇಶವನ್ನೇ ನಿರಾಕರಿಸಿತು. ಜೈನ ಧರ್ಮದ ಪ್ರಕಾರ ಸ್ತ್ರೀ ಮೋಕ್ಷಕ್ಕೆ ಅರ್ಹಳಲ್ಲ; ಒಂದು ವೇಳೆ ಮೋಕ್ಷವನ್ನು ಪಡೆಯಬೇಕಾದರೆ ಆಕೆ ಮುಂದಿನ ಭವಗಳಲ್ಲಿ ಗಂಡಾಗಿ ಹುಟ್ಟಬೇಕು. ಸ್ತ್ರೀಯರನ್ನು ಕುರಿತ 'ವಿಚಾರ' ಹೀಗಿರುವಾಗ, ವಚನಕಾರರು ಈ ಭಾವನೆಯನ್ನು ವಿಮರ್ಶಿಸಿ ಇದು ಎಷ್ಟು

ಅಸಂಬದ್ಧವೆನ್ನುವುದನ್ನು ಎತ್ತಿ ತೋರಿಸಿದರು. ಗಂಡಿಗೂ ಹೆಣ್ಣಿಗೂ ಇರುವ ವ್ಯತ್ಯಾಸ ಯಾವುದು?–

ಮೊಲೆ ಮುಡಿ ಬಂದರೆ ಹೆಣ್ಣೆಂಬರು
ಗಡ್ಡ ಮೀಸೆ ಬಂದರೆ ಗಂಡೆಂಬರು
ನಡುವೆ ಸುಳಿವಾತ್ಮನು ಗಂಡೂ ಅಲ್ಲ,
ಹೆಣ್ಣೂ ಅಲ್ಲ ಕಾಣಾ ರಾಮನಾಥ.

ಎನ್ನುತ್ತಾನೆ ಜೇಡರ ದಾಸಿಮಯ್ಯ. ಈ ವಿಚಾರ ಅತ್ಯಂತ ತಾರ್ಕಿಕವೂ, ಪಕ್ಷಪಾತರಹಿತವೂ ಆಗಿದೆ. ಹೆಣ್ಣು ಎಂದರೆ, ತಪಸ್ಸಿಗೆ ವಿರೋಧಿ, ಮಾಯೆ, ಮೋಹ ಇತ್ಯಾದಿ ಅಪಸ್ವರಗಳು ಪಾರಂಪರಿಕವಾಗಿ ಬಂದವುಗಳು. ಮಾಯೆ ಎಂದರೆ ಹೆಣ್ಣು ಎಂಬುದು ಎಂಥ ಅಸಂಬದ್ಧ!

ಹೆಣ್ಣು ಮಾಯೆಯೆಂಬರು, ಹೊನ್ನು ಮಾಯೆಯೆಂಬರು,
ಮಣ್ಣು ಮಾಯೆ ಎಂಬರು;
ಹೆಣ್ಣು ಮಾಯೆ ಅಲ್ಲ, ಹೊನ್ನು ಮಾಯೆ ಅಲ್ಲ,
ಮಣ್ಣು ಮಾಯೆ ಅಲ್ಲ,
ಮನದ ಮುಂದಣ ಆಸೆಯೇ ಮಾಯೆ ಕಾಣಾ ಗುಹೇಶ್ವರ!

ಎನ್ನುತ್ತಾರೆ ಅಲ್ಲಮಪ್ರಭುಗಳು. 'ಮಾಯೆ' ಎಂಬ ಮಾತು ಬಂದಾಗಲೆಲ್ಲಾ ಹಿಂದಿನ ಎಲ್ಲಾ ಧರ್ಮಗಳೂ ಹೆಣ್ಣನ್ನೇ ಮುಖ್ಯವಾಗಿ ಹೇಳುತ್ತಾ ಬಂದಿವೆ. ಆದರೆ, ಗಂಡಿಗೆ ಹೆಣ್ಣು ಮಾಯೆ ಆಗುವುದಾದರೆ ಹೆಣ್ಣಿಗೂ ಗಂಡು ಯಾಕೆ ಮಾಯೆ ಅಲ್ಲ? ಈ ಒಂದು ಮಾತನ್ನು ದಿಟ್ಟತನದಿಂದ ಹೇಳಿದವಳು ಅಕ್ಕಮಹಾದೇವಿ ಒಬ್ಬಳೇ,

'ಗಂಡಿಂಗೆ, ಹೆಣ್ಣಾಗಿ ಕಾಡಿತ್ತು ಮಾಯೆ,
ಹೆಣ್ಣಿಂಗೆ ಗಂಡಾಗಿ ಕಾಡಿತ್ತು ಮಾಯೆ'

ಎಂಬ ಮಾತಿನಲ್ಲಿ ಪ್ರತಿಭಟನೆಯ ಧ್ವನಿ ಕೇಳಿಸದಿದ್ದರೂ, ಪ್ರತಿಭಟನೆಯ ವಿಚಾರ ಮಾತ್ರ ಸ್ಫುಟವಾಗಿದೆ. ಉಪನಿಷತ್ ಕಾಲದಲ್ಲಿದ್ದು, ಅನಂತರ ಕಳೆದುಕೊಂಡ ಸ್ಥಾನಮಾನಗಳನ್ನು ಮತ್ತೆ ಸ್ತ್ರೀಯರಿಗೆ ದೊರಕಿಸಿಕೊಟ್ಟದ್ದು ವಚನಕಾರರ ಕ್ರಾಂತಿ. ವಚನಕಾರರಿಂದಾಗಿ, ಸ್ತ್ರೀಗೆ ಧಾರ್ಮಿಕ ಸ್ವಾತಂತ್ರ್ಯ ಲಭಿಸಿತು; ಸರಿಸಮಾನವಾಗಿ ಗೋಷ್ಠಿಗಳಲ್ಲಿ ಕೂತು ವಿಚಾರ ವಿನಿಮಯ ಮಾಡುವ ಸಮಾನತೆ ಲಭಿಸಿತು.



ದೇವರನ್ನು ಕುರಿತ ಕಲ್ಪನೆಯ ಬಗೆಗೂ ವಚನಕಾರರ ವಿಚಾರಗಳು ಪರಂಪರೆಯಿಂದ ಭಿನ್ನವಾಗಿವೆ. ವೇದೋಪನಿಷತ್ತುಗಳ ದೇವರ ವಿರಾಟ್ ಕಲ್ಪನೆ, ಪುರಾಣಾಗಮಗಳ ಕಾಲದಲ್ಲಿ ಅವತಾರ ಕಲ್ಪನೆಯಿಂದ ರಂಜಕವೂ, ಪರಿಮಿತವೂ ಆದ ಸ್ಥಿತಿಗೆ ಇಳಿಯಿತು. ಅಸಂಖ್ಯ ದೇವರುಗಳು, ಅವುಗಳ ಲೀಲೆಗಳನ್ನು ಕುರಿತ ಪುರಾಣಗಳು, ಅನೇಕ ಜಾತಿ–ಮತ–ಪಂಥಗಳ ಮತ್ತು ಅರ್ಥವಿಲ್ಲದ ಆಚಾರ–ವಿಚಾರಗಳ ಹುಟ್ಟಿಗೆ ಮತ್ತು ದೇವಸ್ಥಾನಗಳ ನಿರ್ಮಾಣಕ್ಕೆ ಕಾರಣವಾಯಿತು. ದೇವಸ್ಥಾನಗಳ ನಿರ್ಮಾಣ ಪುಣ್ಯ ಸಂಪಾದನೆಯ ಅಥವಾ ಸ್ವರ್ಗ ಸುಖ ಪ್ರಾಪ್ತಿಯ ಸಾಧನವೆಂದು ಉಳ್ಳವರನ್ನು ಶಾಸ್ತ್ರಗಳು ನಂಬಿಸಿದವು. ದೇವಸ್ಥಾನಗಳು ಉಚ್ಚವರ್ಗದ ಪುರೋಹಿತರ ಸ್ವತ್ತುಗಳಾಗಿ ಭಕ್ತಾದಿಗಳನ್ನು ಸುಲಿಯುವ ತಂತ್ರಗಳಾದವು. ಇಂತಹ ಹಿನ್ನೆಲೆಯಲ್ಲಿ, ದೇವರು, ದೇವಸ್ಥಾನಗಳನ್ನು ಕುರಿತು ವಚನಕಾರರು ನಡೆಯಿಸಿದ ವಿಚಾರ ಗಮನಾರ್ಹವಾದುದಾಗಿದೆ. ಮೊದಲನೆಯ ಹೆಜ್ಜೆಯೆಂದರೆ, ದೇವಸ್ಥಾನಗಳನ್ನು ನಿರಾಕರಿಸುವುದು. ಹಾಗೆ ಮಾಡುವದರಿಂದ, ಪುರೋಹಿತ ವರ್ಗದವರು ದೇವಸ್ಥಾನದ ನೆಪದಲ್ಲಿ, ಧರ್ಮದ ಹೆಸರಿನಲ್ಲಿ ಜನರನ್ನು ಶೋಷಿಸುವುದನ್ನು ತಪ್ಪಿಸುವದರ ಜೊತೆಗೆ, ದೇವಸ್ಥಾನಗಳು ಕೆಲವರಿಗೆ ಪ್ರವೇಶವನ್ನು ದೊರಕಿಸುವ, ಇನ್ನು ಕೆಲವರಿಗೆ ಹೀನ ಕುಲದವರೆಂಬ ಕಾರಣದಿಂದ ಪ್ರವೇಶವನ್ನು ನಿರಾಕರಿಸುವ ತಾರತಮ್ಯ ಭಾವನೆಗಳನ್ನೇ ತೊಡೆದು ಹಾಕುವುದೂ ಸಾಧ್ಯವಾಗುತ್ತದೆ ಎಂದು ಯೋಚಿಸಿದರು. ಎರಡನೆಯದಾಗಿ ದೇವರ ಕಲ್ಪನೆಯನ್ನೇ ಬದಲಾಯಿಸಿದರು. ದೇವರೆಂದರೆ ವಚನಕಾರರ ಪ್ರಕಾರ, ಪುರಾಣೋಕ್ತವಾದ ವರ್ಣರಂಜಿತವಾದ ಮೂರ್ತಿ ಅಲ್ಲ; ಅವರ ಪ್ರಕಾರ ಅದೊಂದು ನಿರಾಕಾರಕ್ಕೆ ಸಮೀಪವಾದ ಸಂಕೇತ. ಅದನ್ನೇ ಅವರು 'ಲಿಂಗ'ವೆಂದು ಕರೆದರು. ಅದನ್ನು ವ್ಯಕ್ತಿ ಶರೀರದ ಮೇಲೆ ಧರಿಸಬೇಕು ಎಂದರು. ಅಂಗದ ಮೇಲೆ ಇರುವ ಈ ಲಿಂಗವೇ, ದೇವರ ಒಂದು ಸಾಂಕೇತಿಕ ರೂಪ ಎಂದು ಹೇಳುವುದರ ಮೂಲಕ ಭಕ್ತನಿಗೆ ಬಹಿರಂಗದ ದೇವಸ್ಥಾನಕ್ಕೆ ಹೋಗಬೇಕಾದ ಅಗತ್ಯವಿಲ್ಲದಂತೆ ಮಾಡಿದರು; ಈ ಲಿಂಗ ಇರುವ ಸ್ಥಳವೇ ದೇವಾಲಯ, ಅಂದರೆ ಭಕ್ತನಾದವನ 'ದೇಹವೇ ದೇಗುಲ' ಎಂಬ ಕಲ್ಪನೆಯನ್ನು ಕೊಟ್ಟರು.

ಉಳ್ಳವರು ಶಿವಾಲಯವ ಮಾಡುವರು
ನಾನೇನ ಮಾಡುವೆನು ಬಡವನಯ್ಯಾ
ಎನ್ನ ಕಾಲೇ ಕಂಭ, ದೇಹವೇ ದೇಗುಲ
ಶಿರವೇ ಹೊನ್ನ ಕಳಸವಯ್ಯಾ

ಎನ್ನುವ ಬಸವಣ್ಣನವರ ವಚನ ಈ ವೈಚಾರಿಕತೆಗೆ ನಿದರ್ಶನವಾಗಿದೆ. ದೇವರ ಕಲ್ಪನೆ ಐತಿಹಾಸಿಕವಾಗಿ, ನಿಸರ್ಗದಿಂದ ದೇಗುಲಕ್ಕೆ ಬಂದದ್ದು, ದೇಗುಲದಿಂದ ವ್ಯಕ್ತಿಯ ದೇಹಕ್ಕೆ ಸ್ಥಳಾಂತರಿತವಾದದ್ದು, ದೇವಸ್ಥಾನದ ಬದಲು ದೇಹವೇ ದೇಗುಲವಾದದ್ದು ತೀರಾ ಮಹತ್ವದ ಬದಲಾವಣೆ. ಇದರಿಂದ ದೇವರು ಎನ್ನುವುದು ನಮ್ಮಿಂದಾಚೆಯದಲ್ಲ, ಅದು ನಮ್ಮ ಒಳಗಿನದು ಎನ್ನುವ ತಿಳಿವಳಿಕೆಯು ಹೊಸ ರೀತಿಯದಾಗಿದೆ. ದೇವಸ್ಥಾನಗಳನ್ನು ಕುರಿತ ಪ್ರತಿಭಟನೆ ವಚನಕಾರರ ಕಾಲದಲ್ಲಿ ಎದ್ದು ಕಾಣವಂಥದ್ದು.

ಕಟ್ಟಿದ ಲಿಂಗವ ಬಿಟ್ಟು, ಬೆಟ್ಟದ ಲಿಂಗಕ್ಕೆ ಹೋಗಿ
ಹೊಟ್ಟೆಯಡಿಯಾಗಿ ಬೀಳುವ, ಲೊಟ್ಟೆ ಮೂಗನ ಕಂಡರೆ
ಮೆಟ್ಟಿದ್ದ ಎಡಪಾದರಕ್ಷೆಯ ತಕ್ಕೊಂಡು
ಲಟಲಟನೆ ಹೊಡೆ ಎಂದ ಅಂಬಿಗರ ಚೌಡಯ್ಯ

* *

ಹತ್ತು ಮತ್ತರದ ಭೂಮಿ, ಭತ್ತದ ಹಯನು
ನಂದಾದೀವಿಗೆಯ ಮಾಡಿದೆವೆಂಬರ
ಮುಖವ ನೋಡಲಾಗದು,
ಅವರ ನುಡಿಯ ಕೇಳಲಾಗದು.

ಈ ಎರಡು ವಚನಗಳ ಧೋರಣೆಯನ್ನು ನೋಡಬೇಕು. ಮೊದಲನೆಯದು, ದೇವಸ್ಥಾನಕ್ಕೆ ಹೋಗುವವರನ್ನು ಕುರಿತ ಪ್ರತಿಭಟನೆಯಾದರೆ, ಎರಡನೆಯದು, ದೇವಸ್ಥಾನಕ್ಕಾಗಿ ದಾನದತ್ತಿಗಳನ್ನು ಬಿಡುವ ಶ್ರೀಮಂತರನ್ನು ಕುರಿತ ಪ್ರತಿಭಟನೆಯಾಗಿದೆ. ಈ ಪ್ರತಿಭಟನೆಯ ಅಂಶ ವಚನಕಾರರ ವೈಚಾರಿಕತೆಯ ಪ್ರಧಾನವಾದ ಲಕ್ಷಣವಾಗಿದೆ.

ವಚನಕಾರರ ವಿಚಾರ ಕ್ರಾಂತಿಯ ಮತ್ತೊಂದು ಅಂಶವೆಂದರೆ, ಇಹ–ಪರಗಳನ್ನು ಕುರಿತ ಪರಂಪರಾಗತವಾದ ಭಾವನೆಯನ್ನು ಚಿಕಿತ್ಸೆಗೆ ಗುರಿಪಡಿಸಿದ್ದು. ಈ ದೇಶದ ರೂಢಿಗತವಾದ ನಂಬಿಕೆ ಯಾವುದೋ ಒಂದು ಘಟ್ಟದಲ್ಲಿ ಈ ಬದುಕನ್ನು ಇಹ ಮತ್ತು ಪರ ಎಂದು ವಿಭಾಗಿಸಿ, ಇಲ್ಲದ ಗೊಂದಲವನ್ನು ತಂದಿತು ಎಂದು ನಮ್ಮ ಅಭಿಪ್ರಾಯ. 'ಇಹ ಲೋಕದ ಕರ್ಮಗಳನ್ನು ಮಾಡುತ್ತಲೇ ನೂರು ವರ್ಷಗಳ ಕಾಲ ಬದುಕೋಣ'. 'ನೂರು ಶರದ್ ಋತುಗಳನ್ನು



ನೋಡೋಣ' ಎಂಬ ಉಪನಿಷತ್ ಕಾಲದ ಜೀವನ ಪ್ರೀತಿ, ಬರಬರುತ್ತಾ ಈ ಲೋಕವನ್ನು ತಿರಸ್ಕರಿಸುವ, ಸ್ವರ್ಗವನ್ನು ಬಯಸುವ ಒಂದು ಪ್ರವೃತ್ತಿಯಾಗಿ ಇಹದ ಬದುಕನ್ನು ದ್ವಂದ್ವದ ಗೊಂದಲಕ್ಕೆ ಸಿಕ್ಕಿಸಿತು. ಇದು ಎಷ್ಟು ದೂರ ಬಂತೆಂದರೆ, 'ಇಹ'ದ ಬದುಕೇನಿದ್ದರೂ ಅನಿಷ್ಟ, ಅಶಾಶ್ವತ, ಪರವೆಂಬುದೇ ಮನುಷ್ಯನ ಬದುಕಿನ ವಿಮುಖ ಗುರಿ; ಇಹದ ಸಮಸ್ತವೂ, ಆ 'ಪರ'ಕ್ಕಾಗಿ ಮಾಡಿಕೊಳ್ಳುವ ಪೂರ್ವಸಿದ್ಧತೆ ಎಂಬ ಜೀವನ ವಿಮುಖ ಧೋರಣೆಯಾಯಿತು. ಇದರಿಂದ ಜೀವನ ಪ್ರೀತಿಯೂ ನಷ್ಟವಾಗಿ, ಇಹದ ಜೀವನ ಎಂಬುದು ನಿಕೃಷ್ಟವಾಯಿತು. ಈ ಭಾವನೆಯನ್ನು ಬೌದ್ಧ, ಜೈನ ಧರ್ಮಗಳು ತಕ್ಕಷ್ಟು ಪುಷ್ಟಿಗೊಳಿಸಿವೆ ಎಂಬುದರಲ್ಲಿ ಸಂಶಯವಿಲ್ಲ. 'ಅಲ್ಲಿದೆ ನಮ್ಮ ಮನೆ, ಇಲ್ಲಿ ಬಂದೆ ಸುಮ್ಮನೆ', 'ಮನುಜ ಶರೀರವಿದೇನು ಸುಖ', 'ನಾ ಮಾಡಿದ ಕರ್ಮ ಬಲವಂತವಾದರೆ ನೀ ಮಾಡುವುದೇನೋ ಹರಿಯೇ'– ಎಂಬ ವೈಷ್ಣವ ಕೀರ್ತನೆಗಳಲ್ಲೂ ಈ ಭಾವನೆ ಮುಂದುವರೆದಿದೆ. ವಚನಕಾರರು ಈ ಭಾವನೆಯನ್ನು ನಿರಾಕರಿಸಿ 'ಇಹ–ಪರ'ಗಳ ಸಮನ್ವಯವನ್ನು ಸಾಧಿಸಿದರು. ಪರದ ನಿರಾಕರಣೆ ಮಾಡದೆ ಇಹವನ್ನು ಒಪ್ಪಿಕೊಳ್ಳುವ ಧೋರಣೆಯನ್ನು ರೂಪಿಸಿದ್ದು ಇವರ ವಿಶೇಷತೆ.

ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯಾ
ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರಯ್ಯಾ
ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರಯ್ಯಾ

ಎನ್ನುವುದೇ ಈ ವಿಚಾರ. ಈ ಮರ್ತ್ಯ ಎನ್ನುವುದು ಕರ್ತಾರನ ಟಂಕಸಾಲೆ. ಇದರಲ್ಲಿ ತಯಾರಾಗುವ ಜೀವನಾಣ್ಯ ಮೊದಲು ಇಲ್ಲಿ ಸಲ್ಲುವಂತಿರಬೇಕು; ಹಾಗಾದರೆ ಅದು ಅಲ್ಲೂ (ಪರದಲ್ಲೂ) ಸಲ್ಲುತ್ತದೆ. ಈ ಬದುಕಿನ ಅನಿವಾರ್ಯತೆ, ಅದರಿಂದ ಜೀವನಕ್ಕೆ ಪ್ರಾಪ್ತವಾಗುವ ಬೆಲೆಯನ್ನು ಹೇಳಿದ್ದಷ್ಟೇ ಅಲ್ಲ, ಬದುಕಿನ ಬಗ್ಗೆ ವೀರಭಾವವನ್ನು ತಾಳಬೇಕೆಂಬುದನ್ನೂ ಹೇಳಿದರು.

ಕೊಟ್ಟ ಕುದುರೆಯನೇರಲರಿಯದೆ
ಮತ್ತೊಂದ ಬಯಸುವವರು
ವೀರರೂ ಅಲ್ಲ, ಧೀರರೂ ಅಲ್ಲ

ಎಂಬ ವಚನದಲ್ಲಿ ಅದನ್ನು ಗುರುತಿಸಬಹುದು. ಇಹದ ಜೀವನ ಎಂಬುದು ಒಂದು 'ಕೊಟ್ಟ ಕುದುರೆ', ಇದನ್ನು ಏರಿ ಸವಾರಿ ಮಾಡಬೇಕು. ಹಾಗೆ ಮಾಡದೆ ತಪ್ಪಿಸಿಕೊಳ್ಳುವವರು 'ವೀರರೂ ಅಲ್ಲ, ಧೀರರೂ ಅಲ್ಲ'; ಇದು ಇಹದ ಬದುಕನ್ನು

ಒಂದು ಸವಾಲಿನಂತೆ ಒಪ್ಪಿಕೊಳ್ಳಬೇಕಾದ ರೀತಿ. ಹಾಗೇಯೇ ಬರುವ ಸುಖ–ದುಃಖಗಳನ್ನು ಪೂರ್ವ ಜನ್ಮದ ಪುಣ್ಯ ಹಾಗೂ ಪಾಪಗಳ ಪರಿಣಾಮವೆಂದು ಒಪ್ಪಿಕೊಳ್ಳುವುದೂ ತೀರಾ ದುರ್ಬಲವಾದ ಮನೋಧರ್ಮ. ಇದಾವುದನ್ನೂ ಯೋಚಿಸದೆ, ಇದ್ದದ್ದನ್ನು ಇದ್ದಂತೆಯೇ ಒಪ್ಪಿಕೊಳ್ಳಬೇಕು. ಬಸವಣ್ಣನವರು ಒಂದೆಡೆ,

ಸುಖ ಬಂದರೆ ಪುಣ್ಯದ ಫಲ ಎನ್ನೆನು;
ದುಃಖ ಬಂದರೆ ಪಾಪದ ಫಲ ಎನ್ನೆನು,
ನೀ ಮಾಡಿದೊಡೆ ಆಯಿತ್ತು ಎನ್ನೆನು,
ಸಂಸಾರವ ಸವೆಯೆ ಬಳಸುವೆನು

ಎನ್ನುತ್ತಾರೆ. ಸಂಸಾರವನ್ನು, ಅದು ಇದ್ದಂತೆಯೇ, ಸವೆಯುವಂತೆ ಬಳಸುತ್ತೇನೆ, ಒಂದು ತೊಟ್ಟು ಬಿಡದೆ ಹೀರುತ್ತೇನೆ ಎನ್ನುತ್ತಾರೆ. ಈ ಕೆಲವು ಮಾತುಗಳಲ್ಲಿ ವಚನಕಾರರು ಲೋಕವನ್ನು ಒಪ್ಪಿಕೊಳ್ಳುವ ಈ ದೃಷ್ಟಿ ಭಾರತೀಯ ತಾತ್ವಿಕ ಇತಿಹಾಸದಲ್ಲಿ ಅಪೂರ್ವವಾದ ಒಂದು ನಿಲುವು ಅನ್ನಿಸುತ್ತದೆ.

ಇದು 'ಇಹ'ದ ಮಾತಾಯಿತು. 'ಪರ' ಎಂದೊಡನೆಯೇ ಈ ದೇಶದ ಜನ ಮನದಲ್ಲಿ ತೆರೆಯುವ ಚಿತ್ರಗಳು, ವಿಚಿತ್ರ, ಸ್ವರ್ಗ, ನರಕ, ಕಾಮಧೇನು, ಕಲ್ಪವೃಕ್ಷ, ಅಪ್ಸರೆಯರು ಇತ್ಯಾದಿ. ಆದರೆ ವಚನಕಾರರು ದೇವಲೋಕ, ಸ್ವರ್ಗ, ನರಕಗಳನ್ನು ಕುರಿತು ಜನರಲ್ಲಿ ಪ್ರಚಲಿತವಾದ ನಂಬಿಕೆಗಳನ್ನು ತಲೆಕೆಳಗು ಮಾಡಿದರು; ಅಷ್ಟೇ ಅಲ್ಲ, ಅವುಗಳ ಅರ್ಥವನ್ನು ಬೇರೊಂದು ರೀತಿಯಲ್ಲಿ ವಿವರಿಸಿದರು,

ಅಯ್ಯಾ ಎಂದರೆ ಸ್ವರ್ಗ
ಎಲವೋ ಎಂದರೆ ನರಕ

ಎಂಬ ಎರಡು ಮಾತಿನಲ್ಲಿ ಅದನ್ನು ವ್ಯಾಖ್ಯಾನಿಸಿದ್ದಾರೆ. ಅವರ ಪ್ರಕಾರ ಸ್ವರ್ಗ ಎನ್ನುವುದು ಸತ್ತ ಮೇಲೆ ದೊರೆಯುವ ಒಂದು ಸ್ಥಿತಿ ಅಲ್ಲ; ನರಕವೂ ಅಷ್ಟೇ. ನಾವು ಎಂದೂ ಕಾಣದೆ ಇರುವ ಆ ಲೋಕಗಳ ಬಗ್ಗೆ ಕಲ್ಪನೆ ಕಟ್ಟಿಕೊಳ್ಳುವ ಬದಲು ಅವೆರಡೂ ನಮ್ಮ ವಾಸ್ತವದ ಬದುಕಿನಲ್ಲೇ ಇವೆ–ಎಂದು ಹೇಳಿದರು. 'ಅಯ್ಯಾ ಎಂದರೆ ಸ್ವರ್ಗ'. ನಮ್ಮ ಸುತ್ತಣ ಜನದೊಂದಿಗೆ ಮಾತನಾಡುವಾಗ, ವ್ಯವಹರಿಸುವಾಗ ಅವರನ್ನು ಗೌರವದಿಂದ, ವಿಶ್ವಾಸದಿಂದ 'ಅಯ್ಯಾ' ಎಂದು ಕರೆದರೆ ಅದೇ ಸ್ವರ್ಗ. ಅದರ ಬದಲು 'ಎಲವೋ' ಎಂದು ಒರಟುತನದಿಂದ, ಮರ್ಯಾದೆ ಕೊಡದೆ ವ್ಯವಹರಿಸಿದರೆ ಅದೇ ನರಕ. ವಿಶ್ವಾಸದ, ಗೌರವದ ಮಾತು ಜನದೊಂದಿಗೆ ಆತ್ಮೀಯತೆಯನ್ನು ಹುಟ್ಟಿಸುತ್ತದೆ; ಅವರ ಸಂತೋಷವನ್ನು



ವರ್ಧಿಸುತ್ತದೆ; ಪರಸ್ಪರ ವ್ಯವಹಾರ ಸುಖದಿಂದ ಕೂಡಿರುತ್ತದೆ. ಸುತ್ತಣ ಜನದೊಂದಿಗೆ ಈ ರೀತಿ ಸಂತೋಷದಿಂದ ಇರುವುದಾದರೆ, ಅದಕ್ಕಿಂತ ಬೇರೆಯ 'ಸ್ವರ್ಗ' ಉಂಟೇ? ಹಾಗೆಯೆ 'ಎಲವೋ' ಎಂದು ಒರಟು ಮಾತನಾಡಿ, ತನ್ನ ಸುತ್ತಣವರಲ್ಲಿ ತಿರಸ್ಕಾರ, ಅಸೂಯೆ ಘರ್ಷಣೆಗಳನ್ನು ಹೆಚ್ಚಿಸಿ ಇರುವ ಬದುಕನ್ನು ಬಗ್ಗಡ ಮಾಡಿಕೊಂಡರೆ, ಅದಕ್ಕಿಂತ ಬೇರೆಯ 'ನರಕ' ಉಂಟೇ? ಸ್ವರ್ಗ–ನರಕಗಳೆರಡೂ ನಾವೇ ನಮ್ಮ ನಡವಳಿಕೆಯಿಂದ ನಿರ್ಮಿಸಿಕೊಳ್ಳಬಹುದಾದ 'ಲೌಕಿಕ' ಸ್ಥಿತಿಗಳೇ ಹೊರತು ಬೇರೆ ಅಲ್ಲ. ನಮಗೆ ತೋರುವ ಮಟ್ಟಿಗೆ, ಸ್ವರ್ಗ–ನರಕಗಳ ಬಗೆಗೆ ಬಸವಣ್ಣನವರು ಕೊಟ್ಟಂತಹ ಹೊಸ ಸೂತ್ರವನ್ನು ಯಾರೂ ಕೊಟ್ಟಿಲ್ಲ. ಸಾಮಾನ್ಯ ಜನದೊಂದಿಗೆ ವ್ಯವಹರಿಸಬೇಕಾದ ಬಸವಣ್ಣನವರು, 'ಪುರೋಹಿತ'ರಂತೆ, ಸ್ವರ್ಗ–ನರಕಗಳನ್ನು ಕುರಿತ ಅವರ ನಂಬಿಕೆಗಳನ್ನು ತಮ್ಮ ಬಂಡವಾಳವನ್ನಾಗಿ ಮಾಡಿಕೊಳ್ಳದೆ, ಅವುಗಳನ್ನು ಕುರಿತು, ಹೊಸ ತರ್ಕಸಮ್ಮತವಾದ ಅರ್ಥವನ್ನು ಹಚ್ಚಿದ್ದು ಅವರ ವೈಚಾರಿಕತೆಗೆ ಸೊಗಸಾದ ನಿದರ್ಶನವಾಗಿದೆ. ದೇವಸ್ಥಾನ ನಿರ್ಮಾಣ ಯಜ್ಞ–ಯಾಗಾದಿಗಳ ಆಚರಣೆ ಇವುಗಳಿಂದ ಸ್ವರ್ಗ ಪ್ರಾಪ್ತಿಯಾಗುತ್ತದೆ ಎಂದು ಶಾಸ್ತ್ರಗಳ ಸಹಾಯದಿಂದ ನಂಬಿಸಿ, ಜನರನ್ನು ಸುಲಿಗೆ ಮಾಡುವ 'ಪುರೋಹಿತಶಾಹಿ'ಯ ತಂತ್ರಗಳನ್ನು ವಿಫಲಗೊಳಿಸಬೇಕಾದರೆ, ದೇವರ ಹಾಗೂ ಸ್ವರ್ಗ–ನರಕಗಳ ಕಲ್ಪನೆಯನ್ನೇ ಜನಮನದಲ್ಲಿ ಮಾರ್ಪಡಿಸುವ ಅಗತ್ಯ ವಿಶೇಷವಾಗಿತ್ತು. ಆ ಕಾರ್ಯವನ್ನು ಹೊಸ ವಿಚಾರ ಕ್ರಾಂತಿಯಿಂದ ವಚನಕಾರರು ಮಾಡಲು ಪ್ರಯತ್ನಪಟ್ಟರು.

ಸ್ತ್ರೀ ಪುರುಷರ ನಡುವಣ ಭೇದವನ್ನು ಕುರಿತು, ವಚನಕಾರರು ಪ್ರತಿಭಟಿಸಿ ಸ್ತ್ರೀಯರಿಗೆ ಪುರುಷರೊಂದಿಗೆ ಆಧ್ಯಾತ್ಮಿಕ, ಸಾಮಾಜಿಕ ಸಮಾನತೆಯನ್ನು ತಂದುಕೊಟ್ಟದ್ದಲ್ಲದೆ, ಸಾಮಾಜಿಕವಾದ ಅಸಮಾನತೆಗಳನ್ನು ಕುರಿತು ಅವರು ತೋರಿದ ಪ್ರತಿಭಟನೆಯು ಗಮನಿಸಬೇಕಾದದ್ದು. ವೈದಿಕ ಪರಂಪರೆಯ ವರ್ಣವ್ಯವಸ್ಥೆಯಿಂದಾಗಿ, ಉತ್ತಮ ಜಾತಿ, ಅಧಮ ಜಾತಿಯೆಂಬ ಅತಾರ್ಕಿಕವಾದ ಅಸಮಾನತೆ ಸಮಾಜದಲ್ಲಿದ್ದುದನ್ನು ಕಂಡ ವಚನಕಾರರು, ತಾವು ಪ್ರವರ್ತನಗೊಳಿಸಿದ ಹೊಸ ಧರ್ಮದೊಳಕ್ಕೆ ಎಲ್ಲರನ್ನೂ ಕರೆದುಕೊಂಡು, ಸಮಾನತೆಯನ್ನು ಸ್ಥಾಪಿಸಲು ಪ್ರಯತ್ನಿಸಿದ್ದು ವಿಶೇಷದ ಸಂಗತಿ. 'ವಿಪ್ರ ಮೊದಲು ಅಂತ್ಯಜ ಕಡೆಯಾಗಿ ಶಿವಭಕ್ತರೆಲ್ಲರನೂ ಒಂದೇ ಎಂಬೆ' ಎಂದ ಬಸವಣ್ಣವರ ಮಾತು ಇದಕ್ಕೆ ಒಳ್ಳೆಯ ಉದಾಹರಣೆಯಾಗಿದೆ. ಅಂಬಿಗರ ಚೌಡಯ್ಯ, ಮಾದಾರ ಚೆನ್ನಯ್ಯ, ನುಲಿಯ ಚೆಂದಯ್ಯ ಇತ್ಯಾದಿ ಶಿವಶರಣರ ಹೆಸರುಗಳನ್ನು ನೋಡಿದರೆ ಸಾಕು, ಅವರು

ಯಾವ ಯಾವ ವೃತ್ತಿಯವರು ಮತ್ತು ಅಂದಿನ ಸಮಾಜದ ಯಾವ ಯಾವ ಸ್ಥರಗಳಿಂದ ಅವರು ಬಂದಿರಬಹುದೆಂಬುದನ್ನು ಗುರುತಿಸಬಹುದು. 'ಶಿವಭಕ್ತರೆಲ್ಲರನೂ ಒಂದೇ ಎಂಬೆ' ಎಂಬ ಮಾತು, ಸಮಾನತೆಯನ್ನು ಸ್ಥಾಪಿಸುವ ಉದ್ದೇಶಕ್ಕೆ ವಿರೋಧಿಯಾಗಿಲ್ಲವೆ; ಸಮಾನರೆಂದು ಎಣಿಸಬೇಕಾದರೆ, ಅವರು 'ಶಿವಭಕ್ತ'ರಾಗಿರಬೇಕು ಎಂಬು ನಿಯಾಮನವೇತಕ್ಕೆ ಎಂದು ಇಂದಿನ ಉಗ್ರ ವಿಚಾರವಾದಿಗಳು ಹೇಳಬಹುದು. ಆದರೆ ಹನ್ನೆರಡನೆಯ ಶತಮಾನದಷ್ಟು ಹಿಂದೆ ವಿವಿಧ ಮತಧರ್ಮಗಳವರನ್ನು ಯಾವುದೋ ಒಂದು ಮಿತಿಯಲ್ಲಿ ಕಲೆ ಹಾಕಿ ಸಮಾನತೆಯನ್ನು ಆಚರಿಸಿ ತೋರಿಸಿದ್ದು ಮಹತ್ವದ ವಿಚಾರವಾಗಿದೆ ಎಂಬುದನ್ನು ಮರೆಯಬಾರದು. ಇದಕ್ಕಿಂತ ಮಿಗಿಲಾಗಿ 'ಹೊಲೆತನ'ದ ಪ್ರಶ್ನೆಯನ್ನು ಬಿಡಿಸಿದ್ದು ವಚನಕಾರರ ಮಹತ್ಸಾಧನೆಗಳಲ್ಲಿ ಒಂದು. 'ಹೊಲೆಯ' ಎಂಬುದು, ಸಾಮಾಜಿಕವಾಗಿ ಅತ್ಯಂತ ಕೀಳು ವರ್ಗ ಎಂದು ಪರಂಪರೆ ನಡೆಸಿಕೊಂಡು ಬಂದಿತ್ತು. ಬಸವಣ್ಣನವರಂಥ ವಚನಕಾರರಿಂದಾಗಿ, ಅಷ್ಟು ಹಿಂದೆಯೇ ಅವರಿಗೂ ಈ ಧರ್ಮದೊಳಕ್ಕೆ ಪ್ರವೇಶ ದೊರೆತು ಎಲ್ಲರೊಂದಿಗೂ ಸರಿಸಮಾನವಾಗಿ ಬದುಕುವ ಅವಕಾಶ ಅವರಿಗೆ ದೊರೆಯಿತು. 'ಹೊಲೆಯ' ಎನ್ನುವುದು ಒಂದು ಮನಃಸ್ಥಿತಿಯೇ ಹೊರತು, ಅದೊಂದು ಜಾತಿ ಅಲ್ಲ– ಎನ್ನುವುದೇ ಇವರ ವಿಚಾರ.

ಕೊಲ್ಲುವವನೇ ಮಾದಿಗ
ಹೊಲಸು ತಿಂಬುವವನೇ ಹೊಲೆಯ

.......................................................

ಸಕಲ ಜೀವಾತ್ಮರಿಗೆ ಲೇಸನೇ ಬಯಸುವ
ಕೂಡಲಸಂಗನ ಶರಣರೇ ಕುಲಜರು

ಎನ್ನುವುದು ಹೊಸ ಘೋಷಣೆ. ಹಿಂಸೆಯ, ಹೊಲಸಿನ ಮನೋಭಾವ ಹಾಗೂ ನಡವಳಿಕೆಯಿಂದ ಒಬ್ಬ ಕೀಳಾಗುತ್ತಾನೆಯೇ ಹೊರತು ಅವನ ಹುಟ್ಟಿನಿಂದ ಅಲ್ಲ. 'ಸಕಲ ಜೀವಾತ್ಮರಿಗೆ ಲೇಸನೇ ಬಯಸುವ' ಉದಾರತೆ ಹಾಗೂ ಉದಾತ್ತ ನಡವಳಿಕೆ ಉಳ್ಳವನೇ ನಿಜವಾದ 'ಕುಲಜ'ನು. ಈ ಹೊಸ ವಿಚಾರ, ಪರಂಪರಾಗತವಾದ ಜಾತಿಯ ಕಲ್ಪನೆಯನ್ನು ವಿರೋಧಿಸುತ್ತದೆ. ವಚನಕಾರರು ಸಂಕ್ರಮಣ ಕಾಲದ ಸಮಾಜದಲ್ಲಿನ ಮೇಲು–ಕೀಳುಗಳನ್ನು ಉಗ್ರವಾಗಿ ಖಂಡಿಸಿ, ಸಾಧ್ಯವಾದಷ್ಟು ಸಮಾನತೆಯನ್ನು ನೆಲೆಗೊಳಿಸಲು ಹೇಗೆ ಪ್ರಯತ್ನಪಟ್ಟರೆಂಬುದನ್ನು ಅನೇಕ ವಚನಗಳು ಸ್ಪಷ್ಟಪಡಿಸುತ್ತವೆ.



'ಸಮಾನತೆ'ಗೆ ಇರುವ ಇನ್ನೊಂದು ಆತಂಕ 'ವೃತ್ತಿ'ಯದು ಎಂಬುದನ್ನು ವಚನಕಾರರು ಗುರುತಿಸಿದರು. ಅವನವನು ಅನುಸರಿಸುವ ವೃತ್ತಿಗಳೂ ಕೂಡಾ. ಹಿಂದಿನಿಂದ ಅವನವನ 'ಜಾತಿ'ಗೆ ಅಥವಾ ಸಮಾಜದಲ್ಲಿ ಆ ಜಾತಿಗೆ ಇದ್ದ ಸ್ಥಾನಕ್ಕೆ ಸಂಕೇತಗಳಾಗಿ ಪರಿಗಣಿತವಾಗಿದ್ದವು. ಆದುದರಿಂದ 'ವೃತ್ತಿ'ಯ ಮೇಲೆ ನಿಂತ 'ಮೇಲು–ಕೀಳು'ಗಳ ಭಾವನೆಯನ್ನು ಮಾರ್ಪಡಿಸಿದ ಹೊರತು, ಅವರೆಲ್ಲರೂ ಒಂದು ಸಮಾಜದವರು ಮತ್ತು ಸಮಾನರು ಎಂಬುದನ್ನು ರೂಢಿಸಲು ಸಾಧ್ಯವಾಗುವುದಿಲ್ಲ. ಇದಕ್ಕೆ ಇರುವ ದಾರಿ ಎಂದರೆ, ವೃತ್ತಿಗಳೆಲ್ಲವೂ ಪೂಜ್ಯ, ಅವುಗಳಲ್ಲಿ ಯಾವ ವೃತ್ತಿಯೂ ಮೇಲಾದುದಲ್ಲ, ಯಾವ ವೃತ್ತಿಯೂ ಕೀಳಾದುದಲ್ಲ ಎಂದು ಪರಿಗಣಿಸುವುದು. ಆದುದರಿಂದ ವಚನಕಾರರು 'ಕಾಯಕ' ಎಂಬ ಪರಿಕಲ್ಪನೆಯೊಂದನ್ನು ರೂಪಿಸಿದರು. 'ಕಾಯಕ' ಎಂದರೆ ದೈಹಿಕ ಶ್ರಮ ಅಥವಾ ದುಡಿಮೆ ಎಂದು ಸಾಧಾರಣವಾದ ಅರ್ಥ. ಆದರೆ ವಚನಕಾರರ ಪ್ರಕಾರ 'ಕಾಯಕ' ಎಂದರೆ ಕೇವಲ ದುಡಿಮೆ ಅಥವಾ ದೈಹಿಕ ಶ್ರಮವಷ್ಟೇ ಅಲ್ಲ; ಪೂಜ್ಯ ಭಾವನೆಯಿಂದ, ಅದು ದೇವರ ಸೇವೆ ಎನ್ನುವ ಮನೋಧರ್ಮದಿಂದ ಮಾಡುವ ಕೆಲಸ ಎಂದು ಅರ್ಥ. ಇದು 'ಪೂಜ್ಯ' ಭಾವನೆಯಿಂದ ಮಾಡುವ ಕಾರ್ಯವಾದುದರಿಂದ, ಯಾರು ಯಾವ ಕೆಲಸವನ್ನು ಮಾಡಿದರೂ, ಅದನ್ನು ಒಂದೇ ಉದ್ದೇಶದಿಂದ ಮಾಡುವ ಕಾರಣ, ವೃತ್ತಿಗಳ ತಾರತಮ್ಯ ಭಾವನೆ ತಾನಾಗಿಯೇ ಹೋಗುತ್ತದೆ. 'ಕಾಯಕವೇ ಕೈಲಾಸ' ಎಂಬ ವಚನಕಾರರ ಮಾತು ಇದನ್ನೇ ಸ್ಪಷ್ಟಪಡಿಸುತ್ತದೆ. ಇದು ಕೆಲಸ ಮಾಡುವವರಿಗೆ ಇರಬೇಕಾದ ಒಂದು ಆಧ್ಯಾತ್ಮಿಕವಾದ ಚಿತ್ತಭಿತ್ತಿ. ಇನ್ನು ಸಾಮಾಜಿಕವಾಗಿ ಇದನ್ನು ರೂಢಿಸಬೇಕಾದರೆ, ಪ್ರತಿಯೊಬ್ಬರೂ, ಮತ್ತೊಬ್ಬರ 'ಕಾಯಕ' ಯಾವುದು ಎಂದು ಕೇಳಬಾರದು; ಅವನವನು ಅವನವನ ಸ್ಥಾನದಲ್ಲಿ ಮಾಡುವ ಕೆಲಸ ಮಾನ್ಯವಾದದ್ದು ಎಂದು ಭಾವಿಸಬೇಕು. ಮತ್ತೊಂದು ಅಂಶವೆಂದರೆ ಯಾವುದೇ ಸಮಾಜದಲ್ಲಿ ಸಮಾನತೆಯನ್ನು ತರಬೇಕಾದರೆ, ಕೆಲವರು ಬೆವರು ಸುರಿಸಿ ದುಡಿಯುವ ಮತ್ತೆ ಕೆಲವರು ಏನೂ ಕೆಲಸ ಮಾಡದೆ ಕೂತು ಉಣ್ಣುವ ಪರಿಸ್ಥಿತಿ ಇರಬಾರದು. ಅವನು ಸನ್ಯಾಸಿಯೇ ಆಗಲಿ, ಸಂಸಾರಿಯೇ ಆಗಲಿ ಎಲ್ಲರೂ ದುಡಿದೇ ಬದುಕಬೇಕು. ಇದು 'ಕಾಯಕ' ಎನ್ನುವ ಪರಿಕಲ್ಪನೆಯ ಹಿಂದಿರುವ ಸಾಮಾಜಿಕ ತತ್ವ. ಈ ತತ್ವವನ್ನು ತಿಳಿಸುವ ಅನೇಕ ವಚನಗಳೂ, ಕೆಲವು ವಚನಕಾರರನ್ನು ಕುರಿತ ಪ್ರಸಂಗಗಳೂ ಇವೆ.

ಈ ಬಗೆಯ ಹಿನ್ನೆಲೆಯನ್ನು ನಿರ್ಮಿಸಿತು ವಚನಕಾರರ ವಿಚಾರಕ್ರಾಂತಿ. ಧರ್ಮವೆಂದರೆ ಬದುಕಿಗೆ ಇಳಿಯಲಾರದ ಆದರ್ಶಗಳ, ಆಚಾರಗಳ, ನಂಬಿಕೆಗಳ

ಒಂದು ಕಂತೆ ಎಂದು ವಚನಕಾರರು ಭಾವಿಸಲಿಲ್ಲ. ಧ್ಯಾನ, ಪೂಜೆ, ಪ್ರಾರ್ಥನೆಗಳು ಇರುವುದು ವ್ಯಕ್ತಿಯ ಅಂತರಂಗವನ್ನು ಪರಿಶುದ್ಧಗೊಳಿಸಲು ಮತ್ತು ಮೃದುಗೊಳಿಸಲು. ಈ ಅಂತರಂಗ, ಬಹಿರಂಗದ ನಡವಳಿಕೆಗಳಲ್ಲಿಯೂ ಪ್ರಕಟವಾಗದಿದ್ದರೆ, ಆ ಅಂತರಂಗದ ಆಧ್ಯಾತ್ಮಿಕ ಸ್ಥಿತಿಗೆ ಏನೂ ಅರ್ಥವಿಲ್ಲ. ಹಾಗೆ ನೋಡಿದರೆ, ವ್ಯಕ್ತಿಯ ಬಹಿರಂಗದ ನಡವಳಿಕೆಯೇ ನಿಜವಾದ ತಪಸ್ಸಾಗಬೇಕು–

ಮೃದು ವಚನವೇ ಸಕಲ ಜಪಂಗಳಯ್ಯ
ಮೃದು ವಚನವೇ ಸಕಲ ತಪಂಗಳಯ್ಯ
ಸದುವಿನಯವೇ ಸದಾಶಿವನ ಒಲುಮೆಯ್ಯ

ಎಂಬ ಬಸವಣ್ಣನವರ ಮಾತು, ಈ ವೈಚಾರಿಕತೆಯಿಂದ ಸಿದ್ಧವಾಗಬೇಕಾದ ಸಂಸ್ಕೃತಿಯನ್ನು ವಿವರಿಸುತ್ತದೆ. ಅಂತರಂಗ ಬಹಿರಂಗಗಳ ಆತ್ಮ ಸಂಗವನ್ನು ಸ್ಥಾಪಿಸುವ ಈ ಸಮನ್ವಯ ದೃಷ್ಟಿಯು ವಚನಕಾರರ ವೈಚಾರಿಕತೆಯ ಕೊಡುಗೆಯಾಗಿದೆ.

* * *

**ಲೇಖಕರ ಪರಿಚಯ :**

ಜಿ.ಎಸ್.ಎಸ್. ಎಂದೇ ಕನ್ನಡ ನಾಡಿಗೆ ಪರಿಚಿತರಾದವರು ಜಿ.ಎಸ್. ಶಿವರುದ್ರಪ್ಪರು. ಇವರು ಕವಿ, ವಿಮರ್ಶಕ, ಸಂಶೋಧಕ, ನಾಟಕಕಾರ ಮತ್ತು ಪ್ರಾಧ್ಯಾಪಕರಾಗಿ ಜನಾನುರಾಗಿಯಾಗಿದ್ದವರು. ಇವರ ಪೂರ್ಣ ಹೆಸರು ಗುಗ್ಗರಿ ಶಾಂತವೀರಪ್ಪ ಶಿವರುದ್ರಪ್ಪ. ಇವರ ಜನನ ೭ನೆ ಫೆಬ್ರುವರಿ ೧೯೨೬ ಶಿವಮೊಗ್ಗ ಜಿಲ್ಲೆಯ ಶಿಕಾರಿಪುರ ತಾಲೂಕಿನ ಈಸೂರು ಗ್ರಾಮದಲ್ಲಿ.

ತಂದೆಯಿಂದ ಸಾಹಿತ್ಯದ ಗೀಳು ಹತ್ತಿಸಿಕೊಂಡ ಶಿವರುದ್ರಪ್ಪನವರು ಹೊನ್ನಾಳಿ, ಕೋಟೆಹಾಳದಲ್ಲಿ ಪ್ರಾಥಮಿಕ ಶಿಕ್ಷಣ, ರಾಮಗಿರಿ, ಬೆಲಗೂರಲ್ಲಿ ಮಾಧ್ಯಮಿಕ ಶಿಕ್ಷಣ, ದಾವಣಗೆರೆ, ತುಮಕೂರುಗಳಲ್ಲಿ ಪ್ರೌಢಶಾಲಾ, ಇಂಟರ್ ಮೀಡಿಯೇಟ್ ಶಿಕ್ಷಣವನ್ನು ಮುಗಿಸಿದರು. ಮೈಸೂರು ವಿಶ್ವವಿದ್ಯಾನಿಲಯದ ಮಹಾರಾಜ ಕಾಲೇಜಿನಲ್ಲಿ ಬಿ.ಎ. ಆನರ್ಸ್ ಪದವಿಯನ್ನು ೧೯೪೯ರಲ್ಲಿ ಪಡೆದರು. ೧೯೫೩ರಲ್ಲಿ ಎಂ.ಎ. ಪದವಿಯನ್ನು ಪ್ರಥಮ ದರ್ಜೆಯಲ್ಲಿ ತೇರ್ಗಡೆ ಹೊಂದಿ ಮೂರು ಸುವರ್ಣ ಪದಕಗಳನ್ನು ಪಡೆದರು. ೧೯೫೫ರಲ್ಲಿ ಭಾರತ ಸರ್ಕಾರದ ಸಂಶೋಧನಾ



ಶಿಷ್ಯವೇತನದ ಸಹಾಯದಿಂದ, ಕುವೆಂಪುರವರ ಮಾರ್ಗದರ್ಶನದಲ್ಲಿ **"ಸೌಂದರ್ಯ ಸಮೀಕ್ಷೆ"** ಎಂಬ ಮಹಾಪ್ರಬಂಧಕ್ಕೆ ಮೈಸೂರು ವಿಶ್ವವಿದ್ಯಾನಿಲಯದಿಂದ ಪಿ.ಎಚ್.ಡಿ. ಪದವಿಯನ್ನು ಪಡೆದುಕೊಂಡರು.

೧೯೬೩ರಿಂದ ಎರಡು ವರ್ಷಗಳ ಕಾಲ ಹೈದರಾಬಾದಿನ ಉಸ್ಮಾನಿಯಾ ವಿಶ್ವವಿದ್ಯಾಲಯದಲ್ಲಿ ಕನ್ನಡ ವಿಭಾಗದ ಉಪಪ್ರಾಧ್ಯಾಪಕರಾಗಿ, ಮುಖ್ಯಸ್ಥರಾಗಿ ಸೇವೆ ಸಲ್ಲಿಸಿದರು. ೧೯೭೧ರ ನವೆಂಬರಿನಿಂದ ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ವಿಭಾಗದಲ್ಲಿ ಪ್ರಾಧ್ಯಾಪಕರಾಗಿ, ಮುಖ್ಯಸ್ಥರಾಗಿ ಸ್ಮರಣೀಯ ಸೇವೆ ಸಲ್ಲಿಸಿರುವರು.

ಕರ್ನಾಟಕ ಸಾಹಿತ್ಯ ಅಕಾದೆಮಿ ಹಾಗೂ ಪು.ತಿ.ನ. ಟ್ರಸ್ಟ್ ಅಧ್ಯಕ್ಷರಾಗಿ ಕಾರ್ಯನಿರ್ವಹಿಸಿದ ಜಿ.ಎಸ್.ಎಸ್. ಅವರು ಕನ್ನಡ ಸಾರಸ್ವತ ಪ್ರಪಂಚವನ್ನು ತಮ್ಮ ಬರವಣಿಗೆಯ ಮೂಲಕ ಶ್ರೀಮಂತಗೊಳಿಸಿದರು.

ಸಾಮಗಾನ, ಚೆಲುವು ಒಲವು, ತೀರ್ಥವಾಣಿ, ಎದೆತುಂಬಿ ಹಾಡಿದೆನು, ಪ್ರೀತಿ ಇಲ್ಲದ ಮೇಲೆ ಇವರ ಅವರ ಮಹತ್ವದ ಕವನ ಸಂಕಲನಗಳು. ಕನ್ನಡ ಸಾಹಿತ್ಯ ಸಮೀಕ್ಷೆ, ಮಹಾಕಾವ್ಯ ಸ್ವರೂಪ, ಕನ್ನಡ ವಿಮರ್ಶೆಯ ನೆಲೆ–ಬೆಲೆ, ನವೋದಯ, ಕನ್ನಡ ಕವಿಗಳ ಕಾವ್ಯಕಲ್ಪನೆ, ಪ್ರಾಯೋಗಿಕ ವಿಮರ್ಶೆ ಮೊದಲಾದ ವಿಮರ್ಶಾ ಕೃತಿಗಳು. ಇವರ ಸಾಹಿತ್ಯ ಸೇವೆಯ ಅನನ್ಯತೆಗಾಗಿ ಕೇಂದ್ರ ಸಾಹಿತ್ಯ ಅಕಾದೆಮಿ ಪ್ರಶಸ್ತಿ, ಸೋವಿಯತ್ ಲ್ಯಾಂಡ್ ನೆಹರು ಪ್ರಶಸ್ತಿ, ಪಂಪ ಪ್ರಶಸ್ತಿ, ನೃಪತುಂಗ ಪ್ರಶಸ್ತಿ ಮತ್ತು ರಾಷ್ಟ್ರಕವಿ ಗೌರವಕ್ಕೂ ಭಾಜನರಾಗಿರುವರು. ದಾವಣಗೆರೆಯಲ್ಲಿ ಜರುಗಿದ ೬೧ನೆಯ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಸರ್ವಾಧ್ಯಕ್ಷ ಸ್ಥಾನವನ್ನು ಅವರು ಅಲಂಕರಿಸಿದ್ದರು. ಪ್ರಸ್ತುತ ಲೇಖನವನ್ನು ಡಾ.ಜಿ.ಎಸ್. ಶಿವರುದ್ರಪ್ಪ ಸಮಗ್ರ ಗದ್ಯ ಸಂಪುಟ–೧ ರಿಂದ ಆಯ್ದುಕೊಳ್ಳಲಾಗಿದೆ.

**ಲೇಖನದ ಆಶಯ :**

ಸಮಾಜದಲ್ಲಿ ಬೇರೂರಿದ್ದ ಸಾಮಾಜಿಕ, ಧಾರ್ಮಿಕ, ಆರ್ಥಿಕ, ಲಿಂಗತ್ವ ಅಸಮಾನತೆಯಿಂದ ತಲ್ಲಣಿಸಿದ್ದ ಸಮಾಜಕ್ಕೆ ವೈಚಾರಿಕತೆಯ ಸ್ಪರ್ಶ ನೀಡಿದವರು ವಚನಕಾರರು. ಪಂಡಿತ ಮಂಡಲಿಯಲ್ಲಿ ವಿಜೃಂಭಿಸುತ್ತಾ ಜನರಿಂದ ದೂರವಾಗಿದ್ದ ಸಾಹಿತ್ಯವನ್ನು ತಮ್ಮ ಅನುಭಾವಿಕ ನುಡಿಗಳೆಂಬ ವಚನಗಳಿಂದ ಜನರ ಬಳಿಗೆ ಸರಳವಾದ ಭಾಷೆಯಲ್ಲಿ ಜನರಿಗೆ ಅರಿವು ಮೂಡಿಸಲು ಶ್ರಮಿಸಿದರು. ಸಾಮಾಜಿಕ

ಜೀವನದಲ್ಲಿ ಹಾಸುಹೊಕ್ಕಾಗಿದ್ದ ಏರುಪೇರುಗಳನ್ನು, ಅದರ ದೋಷಗಳನ್ನು ವಿಚಾರಪೂರ್ವಕವಾಗಿ ನಿರಾಕರಿಸಿದರು. ವೇದ, ಶಾಸ್ತ್ರ, ಆಗಮ, ತರ್ಕಗಳ ಆಸರೆಯಲ್ಲಿ ಜರುಗುತ್ತಿದ್ದ ಅಮಾನವೀಯ ಸಂಗತಿಗಳನ್ನು ತಿರಸ್ಕರಿಸಿದರು.

ಮನುಷ್ಯನ ಸ್ವಾನುಭವದ ಹಿನ್ನೆಲೆಯಲ್ಲಿ ಅನುಭವಕ್ಕೆ ಬಂದಿರುವ ವಿಚಾರಗಳನ್ನು ಎತ್ತಿ ಹಿಡಿದರು. ಆಧ್ಯಾತ್ಮಿಕ ಸಾಧನೆಗೆ ಇರುವ ಕಠಿಣವಾದ ಮಾರ್ಗಗಳನ್ನು ಪುನರ್‌ವಿಮರ್ಶೆ ಮಾಡಿ ಸನ್ಯಾಸ, ತಪಸ್ಸು, ಸಂಸಾರವನ್ನು ವಚನಕಾರರು ಸಮನ್ವಯಗೊಳಿಸಿದರು. ವಚನಕಾರರು ಗಂಡು ಹೆಣ್ಣಿನ ನಡುವಿರುವ ಶ್ರೇಷ್ಠತೆಯ ವ್ಯಸನವನ್ನು ಕಳೆದರು. ಆ ಮೂಲಕ ಸ್ತ್ರೀಯರಿಗೆ ಧಾರ್ಮಿಕ ಸ್ವಾತಂತ್ರ್ಯವನ್ನು ನೀಡಿ ಸಮಾನತೆಯನ್ನು ತಂದರು. ದೇವರು, ಸ್ವರ್ಗ, ನರಕ, ಪಾಪ, ಪುಣ್ಯ, ವೃತ್ತಿ ತಾರತಮ್ಯದಂತಹ ಅಂಶಗಳನ್ನು ವೈಚಾರಿಕ ಮತ್ತು ವೈಜ್ಞಾನಿಕವಾಗಿ ಜನರಿಗೆ ಅರಿವನ್ನು ಮೂಡಿಸಲು ಪ್ರಯತ್ನಿಸಿದರು. ಅಂತರಂಗ-ಬಹಿರಂಗಗಳ ಆತ್ಮ ಸಂಗವನ್ನು ಸ್ಥಾಪಿಸುವ ಸಮನ್ವಯ ದೃಷ್ಟಿಯು ವಚನಕಾರರ ವೈಚಾರಿಕ ಕೊಡುಗೆಯಾಗಿದೆ.

■■



# ೬. ಎಂಗ್ಟನ ಪುಂಗಿ



**ಕೆ.ಪಿ. ಪೂರ್ಣಚಂದ್ರ ತೇಜಸ್ವಿ**

ಕೆಲವು ದಿನಗಳ ಹಿಂದೆ ಹಾವುಗೊಲ್ಲರವನೊಬ್ಬ ಬಂದ. ತಾನು ಹಾವುಗೊಲ್ಲರ ಎಂಗ್ಟನ ನಂಟಬಾವನೆಂದೂ, ಎಂಗ್ಟ ಹಾವು ಹಿಡಿಯುತ್ತ ಆಕಸ್ಮಿಕವಾಗಿ ಹಾವು ಕಚ್ಚಿ ಸತ್ತೇ ಹೋದನೆಂದೂ ಹೇಳಿದ. ಕೆಲವು ದಿನಗಳಿಂದ ಜ್ವರದಲ್ಲಿ ನರಳುತ್ತಿದ್ದ ಎಂಗ್ಟನಿಗೆ ಹುಷಾರಿರಲಿಲ್ಲವಂತೆ. ಹಾಗಾಗಿ ನಾಗರಹಾವೊಂದನ್ನು ಹಿಡಿಯಹೋದಾಗ ಅದರ ತಲೆಯನ್ನು ಹಿಡಿಯುವುದರ ಬದಲು ಅದರ ಕುತ್ತಿಗೆ ಹಿಡಿದನಂತೆ. ಹಾವಿಗೆ ಹಿಂದಕ್ಕೆ ತಿರುಗಿ ಕಚ್ಚಲು ಅದರಿಂದ ಸಾಧ್ಯವಾಗಿ ಕೆಲವೇ ಗಂಟೆಯೊಳಗೆ ಎಂಗ್ಟ ಸತ್ತು ಹೋದನಂತೆ!

"ಅಲ್ರೋ, ಹಾವಿನ ವಿಷಕ್ಕೆ ಔಷಧಿ ಅಂತ ಬೇರು, ನಾರು, ಮಣಿ ಎಲ್ಲ ನಮಗೆ ಮಾರುತ್ತೀರ? ಮತ್ತೆ ನಿಮಗೆ ಹಾವು ಕಚ್ಚಿದರೆ ಔಷಧಿ ಮಾಡಿಕೊಳ್ಳೋದಕ್ಕೆ ಆಗಲಿಲ್ಲವ? ಹಾಗಾದರೆ ನಿಮ್ಮ ಸುಡುಗಾಡು ಬೇರು ತಗೊಂಡು ನಾವು ಔಷಧಿ ಮಾಡಲು ಹೋದರೆ ನಮ್ಮ ಕಥೆ ಏನು?" ಎಂದು ಕೇಳಿದೆ.

"ನಮ್ಮದೆಲ್ಲಾ ಅಸ್ಲಿ ಔಷಧಿ ಸೋಮಿ. ಅದರಾಗೇನೂ ಮೋಸ ಇಲ್ಲ. ಆ ಔಷಧೀಲಿ ಸುಮಾರು ಜನರ ಜೀವ ಉಳಿಸಿಲ್ವಾ ನಾವು! ಎನೆಂದರೆ ಹಾವು ಎರಡು ಬೆರಳಿನ ಸಂದಿಗೆ ಕಚ್ಚಿದರೆ ಮಾತ್ರ ಯಾರ ಕೈಲೂ ಜೀವ ಉಳಿಸೋದಕ್ಕೆ ಆಗೊಲ್ಲ ಸ್ವಾಮಿ. ಎಂಗ್ಟನಿಗೆ ಸರಿಯಾಗಿ ಅಲ್ಲಿಗೇ ಕಚ್ಚಿತ್ತು" ಎಂದು ಅವನು ಉತ್ತರಿಸಿದ.

"ಪಾಪ, ಇಲ್ಲಿಗೆ ಬಂದಾಗಲೆಲ್ಲ ತೋಟಕ್ಕೆ ಬಂದು ಹಾವು ಹಿಡೀತಿದ್ದ. ಎಂಥ ಅನ್ಯಾಯ ಆಯ್ತು!" ಎಂದು ದುಃಖ ಸೂಚಿಸಿದೆ.

"ಅವನು ಬೇಲೂರಲ್ಲಿ ಸತ್ತಿದ್ದು ಸ್ವಾಮಿ. ಪಾಪ, ಅವನು ಸಾಯ್ತಾ ನಿಮ್ನೇ ನೆನೆಸಿಕೊಂಡು ಸತ್ತ ಸ್ವಾಮಿ" ಎಂದು ನನ್ನ ಕರುಣೆಯನ್ನು ಉದ್ರೇಕಿಸಲು ಹಸೀ ಸುಳ್ಳೊಂದನ್ನು ಹೇಳಿದ. ಸಾಯುತ್ತ ನನ್ನನ್ನು ಜ್ಞಾಪಿಸಿಕೊಳ್ಳಲು ನಾನೇನೂ ಎಂಗ್ಟನ ಏಕಮಾತ್ರ ಆಪ್ತನೇನೂ ಆಗಿರಲಿಲ್ಲ. ಮತ್ತು ಈ ಹಾವುಗೊಲ್ಲರವನಿಗೆ ಅವನು ಜ್ಞಾಪಿಸಿಕೊಂಡದ್ದು ನನ್ನನ್ನೇ ಎಂದು ಗೊತ್ತಾಗಲೂ ಸಾಧ್ಯವಿರಲಿಲ್ಲ. ಏಕೆಂದರೆ ನಾನು ಇವನನ್ನು ನೋಡುತ್ತಿದ್ದುದು ಇದೇ ಮೊದಲು. ನಾನು ಹಾವುಗೊಲ್ಲರ ಎಂಗ್ಟ ಗೊತ್ತೇ ಎಂದು ಇವನನ್ನು ಕೇಳಿದ್ದಕ್ಕೇ ನನಗೂ ಅವನಿಗೂ ಪರಿಚಯ ಇದೆ ಎನ್ನುವ ಸೂಚನೆ ಸಿಕ್ಕಿ, ಅದನ್ನೇ ತನ್ನ ಅನುಕೂಲಕ್ಕೆ ಬಳಸಲು ಇವನು ಯತ್ನಿಸುತ್ತಿರುವಂತೆ ಕಂಡಿತು. ಇವನು ಸ್ವಲ್ಪ ಖದೀಮನೇ ಎಂದು ತೀರ್ಮಾನಿಸಿದೆ. ಆದರೂ ಸಂಭಾಷಣೆ ಶುರು ಮಾಡಿದ ಮೇಲೆ ಹೇಗಾದರೂ ಮುಗಿಸಬೇಕಲ್ಲ. ಅದಕ್ಕಾಗಿ, "ಹೋಗಲಿ ಬಿಡು, ಏನೋ ಆಗಬಾರದ್ದು ಆಗಿಹೋಯ್ತು. ಹಾವು ಹಿಡಿಯೋ ದಂಧೆಗೆ ಹೋದರೆ ಈ ಅಪಾಯ ತಪ್ಪಿದ್ದಲ್ಲ" ಎಂದೆ.

"ಏನ್ ಸ್ವಾಮಿ, ಹೋಗ್ಲಿ ಬಿಡು ಅಂತೀರಲ್ಲ. ಹೋದವನೇನೋ ಹೋದ. ತಣ್ಣಗೆ ಕಣ್ಮುಚ್ಚಿಕೊಂಡು ಸ್ವಾಮಿಪಾದ ಸೇರಿದ. ಇದ್ದೋರ ಪಾಡು ಹೇಳಿ? ಇದ್ದೊಬ್ಬ ಮಗಳ್ನ ದಿಕ್ಕಿಲ್ದ ತಬ್ಬಲಿ ಮಾಡಿ ಹೋಗಿದ್ದಾನೆ. ನಾವು ಈಗ ಅವಳ್ನ ನೋಡಿಕೋಬೇಕಲ್ಲ" ಎಂದ ಅವನು.

ಎಂಗ್ಟನಿಗೆ ಮಗಳಿದ್ದುದು ನನಗೆ ಗೊತ್ತೂ ಇರಲಿಲ್ಲ, ನೋಡಿಯೂ ಇರಲಿಲ್ಲ. ಒಬ್ಬಳು ಹೆಂಡತಿ ಕಟ್ಟಿಕೊಂಡು ತಿರುಗುತ್ತಿದ್ದುದನ್ನು ಮಾತ್ರ ನೋಡಿದ್ದೆ. ಒಂದು ಪುಟ್ಟ ಕೂಸು ಇತ್ತು. ಹುಟ್ಟಿದ ಹಲವು ತಿಂಗಳಿಗೇ ಅದು ತೀರಿ ಹೋಯ್ತೆಂದು ಎಂಗ್ಟ ನನಗೆ ಒಮ್ಮೆ ಹೇಳಿದ್ದ. ಎಂಗ್ಟ ನಿಜವಾಗಿಯೂ ತೀರಿಕೊಂಡಿದ್ದಾನೋ ಅಥವಾ ಬೇರಾವನೋ ಆ ಹೆಸರಿನವನ ಬಗ್ಗೆ ಇವನು ಹೇಳುತ್ತಿದ್ದಾನೋ ನನಗೆ ಅನುಮಾನವಾಯ್ತು. ಎಂಗ್ಟ ಸತ್ತುದಕ್ಕೆ ನಾನು ಬಹಿರಂಗವಾಗಿ ಸಂತಾಪ ಸೂಚಿಸಿದ್ದನ್ನೇ ಇವನು ಬಂಡವಾಳ ಮಾಡಿಕೊಂಡು ನನ್ನ ಬಳಿ ಏನಾದರೂ ಗಿಟ್ಟಿಸಲು ನೋಡುತ್ತಿದ್ದಾನೆನ್ನುವುದು ಮಾತ್ರ ನನಗೆ ಖಚಿತವಾಯ್ತು.

"ಅವನ ಹೆಣ್ತಿ ಸತ್ತೋಗಿದ್ದು ನಿಮಗೆ ಗೊತ್ತಲ್ಲ?" ಎಂದು ಇನ್ನೊಂದು ಕರುಣಾಜನಕ ಕಥೆ ಬಿಚ್ಚಲು ನನ್ನೆದುರು ಪೀಠಿಕೆ ಹಾಕಿದ. ಎಂಗ್ಟ ಇರುವಾಗಲೇ ಅನೇಕ ವರ್ಷಗಳ ಹಿಂದೆ ಅವನ ಹೆಂಡತಿ ತೀರಿಹೋಗಿದ್ದಳು. ಆಕೆ ಸತ್ತಿದ್ದು ಅನೇಕ ರಹಸ್ಯಮಯ ಊಹಾಪೋಹಗಳಿಗೆ ಎಡೆಗೊಟ್ಟಿತ್ತು. ಇನ್ನು ಇವನು



ಮತ್ತೊಂದು ಗಂಟೆ ನನಗೆ ಕೊರೆಯುತ್ತಾನೆಂದು ದಿಗಿಲು ಬಿದ್ದು, "ಗೊತ್ತು, ಗೊತ್ತು, ಬಿಡು. ನಾನು ಅವನ್ನ ಮೊದಲು ನೋಡಿದ್ದೆ ಅವನ ಹೆಣ್ತಿ ಹೆಣದ ಪಕ್ಕ" ಎಂದೆ. ಅವಳು ತೀರಿಕೊಂಡ ಅನಂತರ ಎಂಗ್ಟ ಇನ್ನೊಂದು ಮದುವೆ ಆಗಲು ಯತ್ನಿಸುತ್ತಿದ್ದ.

ಇದನ್ನೆಲ್ಲಾ ವರದಿ ಮಾಡಿದ ಮೇಲೂ ಆ ಆಸಾಮಿ ನಿಂತೇ ಇದ್ದ. "ಹಾವು ಹಿಡೀತೀಯೇನೋ?" ಎಂದು ಕೇಳಿದ್ದಕ್ಕೆ, "ನನಗೆ ಪುಂಗಿ ಊದಕ್ಕೆ ಬರೋದಿಲ್ಲ ಸೋಮಿ" ಎಂದ. ಆದರೆ ಜಾಗ ಬಿಟ್ಟು ಕದಲದೆ ನಿಂತಲ್ಲೇ ನಿಂತಿದ್ದ. ಇವನ ಸಾನ್ನಿಧ್ಯದಿಂದ ಹೇಗಾದರೂ ಪಾರಾಗಬೇಕೆಂದು ನಿರ್ಧರಿಸಿ ಬೇರೆ ಉಪಾಯ ಕಾಣದೆ, "ಈಗೇನಾಗಬೇಕು ನಿಮಗೆ? ನಿಂತೇ ಇದ್ದೀಯಲ್ಲ?" ಎಂದು ಬಾಯಿ ಬಿಟ್ಟೇ ಕೇಳಿದೆ.

"ಏನಿಲ್ಲಾ ಸೋಮಿ ನಿಮ್ಮಂತೋರ ಹತ್ರ ಮೂರ್ಕಾಸು ಆರ್ಕಾಸು ಇಸುಗೊಂಡು ಆ ಹೆಣ್ಣು ಮಗಳಿಗೆ ಒಂದು ರವಕೆ ತಕ್ಕೊಡೋಣ ಅಂತಿದೀನಿ" ಎಂದ.

ಅದೂ ಸುಳ್ಳೇ. ಸಂಜೆ ಸರಿಯಾಗಿ ಷರಾಬು ಹುಯ್ದುಕೊಳ್ಳೋದಕ್ಕಷ್ಟೇ ಅವನು ಹಣ ಕೇಳುತ್ತಿದ್ದುದು. ಆದರೆ ಇದೆಲ್ಲ ಸುಳ್ಳು ಎಂದು ಅವನಿಗೆ ಜೋರು ಮಾಡಿ ತನಿಖೆಗೆ ಹೊರಟರೆ ಇನ್ನೂ ಹಲವಾರು ಗಂಟೆ ಅವನ ಕಪಟ ನಾಟಕ ನೋಡುತ್ತಾ ಇರಬೇಕಾಗುತ್ತದೆ. ಅದಕ್ಕಾಗಿ ಅವನಿಗೆ ಕೂಡಲೆ ಒಂದು ರೂಪಾಯಿ ಕೊಟ್ಟೆ. ಅವನು ಪರಮಾನಂದದಿಂದ ಎಂಗ್ಟನ ಆತ್ಮಕ್ಕೆ ಶಾಂತಿ ಕೋರುತ್ತ ಅಲ್ಲಿಂದ ನಿರ್ಗಮಿಸಿದ.

ಹಾವುಗೊಲ್ಲರ ಎಂಗ್ಟ ಹಾವು ಕಡಿದು ಸತ್ತಿದ್ದು ನಿಜವಿದ್ದರೂ ಇರಬಹುದು. ಏಕೆಂದರೆ ಅವನನ್ನು ನಾನು ಕೊನೆಯ ಬಾರಿ ನೋಡಿದ್ದು ಈಗ್ಗೆ ಎರಡು ಮೂರು ವರ್ಷಗಳ ಹಿಂದೆ. ಕರಿಯಪ್ಪನೂ ಅವನೂ ಎಂಟು ಮೈಲಿ ದೂರದ ಆಲದೂರಿನಿಂದ ಸೈಕಲ್ ಮೇಲೆ ಡಬ್ಬಲ್‌ರೈಡು ಹೊಡೆದುಕೊಂಡು ಬಂದು ನನ್ನ ಬಳಿ ಜಗಳ ಆಡಿದ್ದರು. ನಾನು ಅವರ ಮೇಲೆ ಸಿಕ್ಕಾಪಟ್ಟೆ ಏನೇನನ್ನೋ ಬರೆದಿದ್ದೇನೆಂದು ಅವರಿಗೆ ಸಿಟ್ಟು ಬಂದಿತ್ತು. ಇಬ್ಬರೂ ಓದು ಬರಹ ಬರುವವರಲ್ಲ. ಕರಿಯಪ್ಪ ಬಸ್ಸಿಗೆ ಕಾಯುತ್ತ ನಿಂತಿದ್ದಾಗ ಅವನೊಡನೆ ನಿಂತಿದ್ದ ಸ್ಕೂಲು ಹುಡುಗರು ಕರ್ವಾಲೋ ಕಾದಂಬರಿಯಲ್ಲಿ ಕರಿಯಪ್ಪ ಎಂಗ್ಟನ ಹೆಂಡತಿಯನ್ನು ಇಟ್ಟುಕೊಂಡಿದ್ದಾನೆ ಮುಂತಾಗಿ ಕಂಡಾಪಟ್ಟೆ ಬರೆದಿದ್ದೇನೆಂದು ಅವನಿಗೆ ಹೇಳಿ ನಗಾಡಿದರಂತೆ. ಅದರಿಂದ ರೇಗಿದ ಕರಿಯಪ್ಪ ಎಂಗ್ಟನನ್ನೂ ಕರೆದುಕೊಂಡು 'ಇಚಾರಣೆ' ಮಾಡಲು ಬೆಳಗಿನ ಝಾವಕ್ಕೇ ಮನೆ ಬಳಿಗೆ ಹಾಜರಾಗಿದ್ದ.

"ಇರಬಹುದು. ನಾನು ಅಂಥವನೇ ಅಂತಿಟ್ಕೊಳ್ಳಿ. ಗಂಡಸರೂ ಅಂದ ಮೇಲೆ ಕೆಸರು ಕಂಡಲ್ಲಿ ತುಳಿತೀವಿ. ನೀರು ಕಂಡಲ್ಲಿ ತೊಳೀತೀವಿ. ಆದರೆ ನಾನ್ಯಾವ ಜಾತಿ. ಇವನ್ಯಾವ ಜಾತಿ. ನನ್ನ ನೀವು ಇಂಥವಾ ಅಂಥ ತಿಳಿದಿದ್ದೀರಲ್ಲಾ" ಎಂದು ಕರಿಯಪ್ಪ ಕೂಗಾಡಿದ.

ಬಹುಶಃ ಯಾವ ಲೇಖಕನಿಗೂ ಅವನ ಪಾತ್ರಗಳು ಹೀಗೆ ಕತೆಯಿಂದೆದ್ದು ಬಂದು 'ಇಚಾರಣೆ' ಮಾಡಿಲ್ಲವೆಂದು ತೋರುತ್ತದೆ. ನಾನು ಕರ್ವಾಲೋ ಕಾದಂಬರಿ ಬರೆದು ಹದಿನೈದು ವರ್ಷದ ತರುವಾಯ ಅದನ್ನು ಸ್ಕೂಲು ಹುಡುಗರಿಗೆ ಪಠ್ಯ ಪುಸ್ತಕ ಮಾಡಿ, ಅವರ ಬಾಯಿಂದ ಇವನ ಕಿವಿಗೆ ಬರೆದಿದ್ದು ಬರೆದಿಲ್ಲದ್ದು ಎಲ್ಲ ಬಿದ್ದು ಆ ಪಾತ್ರಗಳು ಬಂದು ಜಗಳ ಆಡುತ್ತಾವೆಂದು ನನಗೆ ಕನಸು ಮನಸ್ಸಿನಲ್ಲಿಯೂ ಹೊಳೆದಿರಲಿಲ್ಲ. ಅವರ ಬಗ್ಗೆ ಯಾವುದೇ ದುರಭಿಪ್ರಾಯ ಇಲ್ಲದ ನಾನು ಕಂಡಾಪಟ್ಟೆ ಬರೆದು ಮರ್ಯಾದೆ ತೆಗೆಯಲು ಕಾರಣವೇ ಇರಲಿಲ್ಲ, ನಾನು ಅಂಥದೇನನ್ನೂ ಬರೆದಿಲ್ಲವೆಂದೂ, ಹಾಗೇನಾದರೂ ಇದ್ದರೆ ಮುಂದಿನ ಸಾರಿ ಸರಿಯಾಗಿ ಬರೆಯುತ್ತೇನೆಂದೂ ಹೇಳಿದೆ. ಅವರ ಕೋಪ ಎಷ್ಟು ಕ್ಷಣಿಕವಾದುದೆಂದರೆ ಅಷ್ಟು ಹೇಳಿದ್ದಕ್ಕೇ ಅವರಿಗೆ ಸಮಾಧಾನವಾಗಿ ಅದೇನು ಬರೆದಿದ್ದೀರೆಂದು ಸಹ ಅವರು ವಿವರಣೆ ಕೇಳಲಿಲ್ಲ.

ಎಂಗ್ಟ ನಿರ್ಗಮಿಸುತ್ತಾ, "ನಿಮಗೆಲ್ಲಾ ಗೊತ್ತಲ್ಲ ಸೋಮಿ ನನ್ನ ಇಚಾರ. ಅದ್ನೆಲ್ಲಾ ಬರೀರಿ. ಸುಮ್ನೆ ಏನೇನೋ ಬರೀಬ್ಯಾಡ್ರಿ" ಎಂದು ಹೇಳಿ ಹೋದ. ಎಂಗ್ಟನನ್ನು ನಾನು ನೋಡಿದ್ದು ಅದೇ ಕೊನೇ ಬಾರಿ.

೨

ಎಂಗ್ಟನನ್ನು ನಾನು ಮೊದಲ ಬಾರಿ ನೋಡಿದಾಗ ಸುತ್ತ ನೆರೆದವರ ದೃಷ್ಟಿಯಲ್ಲಿ ಅವನು ಕೊಲೆಪಾತಕಿಯಾಗಿದ್ದ. ಅವನ ಹೆಂಡತಿ ಬಯಲಿನಲ್ಲಿ ಹಾಕಿಕೊಂಡಿದ್ದ ಗುಡಾರದ ಬಳಿ ಸತ್ತುಬಿದ್ದಿದ್ದಳು. ದಾರಿಹೋಕರೆಲ್ಲ ಅವನ ಗುಡಾರದ ಬಳಿ ಗುಂಪಾಗಿ ಸೇರಿದ್ದರು. ಎಂಗ್ಟ ಅವನ ಹೆಂಡತಿಯ ಹೆಣದ ಬಳಿ ಕುಳಿತು ಹೋ ಎಂದು ಬೊಬ್ಬೆ ಮಾಡುತ್ತ ಅಳುತ್ತಿದ್ದ. ಎಂಗ್ಟ ಆಗ ನನಗೆ ಗೊತ್ತಿರಲಿಲ್ಲ. ಆದ್ದರಿಂದ ಪಕ್ಕದವರನ್ನು ಏನು ಸಮಾಚಾರ ಎಂದು ಕೇಳಿದೆ. "ಅವನ ಹೆಂಡ್ತೀನ ಯಾರೋ ಖೂನಿ ಮಾಡಿದ್ದಾರೆ ಅಂತಾನಪ್ಪ! ಈ ಬಿಕನಾಸಿ ಹೆಂಗ್ಸನ್ನ ಹಾಡುಹಗಲಲ್ಲಿ ಅದೂ ಬಟ್ಟಂಬಯಲಲ್ಲಿ ಯಾರು ಯಾತಕ್ಕೆ ಖೂನಿ ಮಾಡ್ತಾರೆ ಹೇಳಿ. ಅವಳ ಹತ್ರ ಏನು ದುಡ್ಡಿದೆಯಾ, ದುಗ್ಗಾಣಿ ಇದೆಯಾ?" ಎಂದು ಅವರು ಉದ್ಗರಿಸಿದರು.



ಪಕ್ಕ ನಿಂತ ಇನ್ನೊಬ್ಬ, "ಖೂನಿ ಅಲ್ಲ ಏನೂ ಅಲ್ಲ. ಇದು ಖೂನಿ ಆದರೆ ಅವಳ ಮೈಮೇಲೆ ಒಂದು ಚೂರಾದರೂ ಗಾಯ ಇರ್ತಿರಲಿಲ್ವಾ? ನಿದ್ದೆ ಮಾಡಿದ ಹಂಗೆ ಮಲಗಿದಾಳೆ! ಈ ಸೂಳೆ ಮಗನೇ ಕುತ್ಗೆ ಹಿಚುಕಿ ಈಗ ಬೊಬ್ಬೆ ಮಾಡ್ತಿರಬೆಕು" ಎಂದ.

"ಅಲ್ಲಿ ನೋಡಿ! ಅವನ ಗುಡಾರದ ತುಂಬಾ ಆ ಬುಟ್ಟಿ ಒಳಗೆ ಬಟ್ಟೆ ಗಂಟಿನಲ್ಲಿ ಇಪ್ಪತ್ತೆಂಟು ತರದ ಹಾವು. ಅದರಾಗೆ ಯಾವುದಾದ್ರೂ ಕಚ್ಚಿತೋ ಏನು ಕತೆಯೋ ಸತ್ತೋಗಿದ್ದಾಳೆ" ಎಂದು ಮತ್ತೂ ಒಬ್ಬ ಉದ್ಗರಿಸಿದ.

ನಾನು ಅವನ ಗುಡಾರದತ್ತ ನಿಂತಲ್ಲಿಂದಲೇ ನೋಡಿದೆ. ದೊಡ್ಡ ಹಾವೊಂದು ಹೊರಗೆ ಗುಡಿಸಲಿನ ಗೂಟಕ್ಕೆ ಸುತ್ತಿಕೊಂಡು ಮಲಗಿದ್ದು ಮಾತ್ರ ಕಂಡಿತು. ಅದರ ಗಾತ್ರ ನೋಡಿ ಹೆಬ್ಬಾವು ಇರಬೇಕೆಂದು ತಿಳಿದೆ. ಆದರೆ ಅದು ಹೆಬ್ಬಾವಲ್ಲ. ದಾಸರಹಾವು ಎಂದು ಪಕ್ಕ ನಿಂತವನೊಬ್ಬ ಹೇಳಿದ. ಗುಡಿಸಲಿನೊಳಗೆಲ್ಲಾ ಈ ಥರ ಯಮದೂತರಂಥ ಹಾವುಗಳನ್ನು ತುಂಬಿಕೊಂಡು ಇಲ್ಲಿಯವರೆಗೂ ಬದುಕಿದ್ದೇ ಒಂದು ಅಚ್ಚರಿಯಾಗಿ ಕಂಡಿತು. ಆದರೂ ಅವನ ಹೆಂಡತಿ ಸತ್ತಿದ್ದು ಹೇಗೆಂದು ಯಾರಿಗೂ ಸರಿಯಾಗಿ ಅರ್ಥವಾಗಲಿಲ್ಲ. ಒಟ್ಟಿನಲ್ಲಿ ಗಟ್ಟಿಮುಟ್ಟಾಗಿದ್ದ ಅವಳು ಸತ್ತಿದ್ದಂತೂ ನಿಜ. ಅಲ್ಲಿದ್ದ ಎಲ್ಲರ ಅಭಿಪ್ರಾಯವೂ ಇಲ್ಲ ಹಾವು ಕಚ್ಚಿರಬೇಕು, ಎಲ್ಲಾ ಎಂಗ್ಟನೇ ಖೂನಿ ಮಾಡಿರಬೇಕು ಎಂದೇ ಇತ್ತು.

ಎಂಗ್ಟ, "ನಾನು ಈಗತಾನೆ ಪ್ಯಾಟೆಕಡಿಂದ ಬಂದೆ. ಬಂದು ನೋಡಿದರೆ ಸತ್ತೋಗಿದಾಳೆ! ನಾನ್ಯಾಕೆ ಖೂನಿ ಮಾಡಲಿ?" ಎಂದು ಹೇಳುತ್ತ ಪೇಟೆ ಕಡೆಯಿಂದ ಅವನ ಜೊತೆ ಬಂದವರೊಬ್ಬರನ್ನು ತೋರಿಸಿದ. ಹಾವು ಕಚ್ಚಿ ಸತ್ತರೆ ಮೈ ನೀಲಿಗಟ್ಟುತ್ತದೆಂದೂ, ಇದು ಹಾವು ಕಚ್ಚಿದ್ದು ಅಲ್ಲವೇ ಅಲ್ಲವೆಂದೂ ಅಲ್ಲಗಳೆದ.

ಎಂಗ್ಟ ತನ್ನ ಹೆಂಡತಿ ಹೇಗೆ ಸತ್ತಳೆಂಬುದಕ್ಕೆ ಗಮನ ಹೆಚ್ಚು ಕೊಡದೆ ಅವಳು ಸತ್ತಳೆಂದು ದೊಡ್ಡ ಗಂಟಲಿನಲ್ಲಿ ಹುಯ್ಯಲಿಡುವುದಕ್ಕೇ ಹೆಚ್ಚು ಗಮನ ಕೊಡುತ್ತಿರುವುದು ಅಲ್ಲಿದ್ದವರೆಲ್ಲರಿಗೂ ಈ ಪಾತಕಿಯೇ ಕೊಂದಿರಬೇಕೆಂದು ಅನುಮಾನ ಬರಲು ಕಾರಣ. "ಇವನೇ ಕೊಂದಿರಬೆಕು. ಪೆಟ್ಟು ಹೊಡೆದಿದ್ದಾನೆ. ಎಲ್ಲೋ ಆಯಕ್ಕೆ ತಗುಲಿ ಸತ್ತೋಗಿದಾಳೆ. ಹಂಗೇ ಮಲಗಿಸಿ ಪ್ಯಾಟೆಗೆ ಹೊಗಿ ಬಂದು ಬೊಬ್ಬೆ ಮಾಡ್ತಿದಾನೆ. ಅವನ ಕಣ್ಣಾಗೆ ಒಂದು ತೊಟ್ಟು ನೀರಿದೆಯಾ ನೋಡಿ. ಸುಮ್ನೆ ತುತ್ತೂರಿ ಊದಿದ ಹಾಗೆ ಕೂಗ್ತಿದಾನೆ" ಎಂದು ಅವನ ಕಣ್ಣಲ್ಲಿ ನೀರಿಲ್ಲದುದನ್ನೇ ಅವನು ಕೊಲೆ ಮಾಡಿದ್ದಾನೆನ್ನುವುದಕ್ಕೆ ಪ್ರಧಾನ ಸಾಕ್ಷ್ಯಮಾಡಿ ಯಾರೋ ನನ್ನ ಪಕ್ಕ ನಿಂತಿದ್ದ ಇನ್ನೊಬ್ಬನಿಗೆ ಹೇಳಿದ.

ಅವನ ಹುಯ್ಯಲಿಗೆ ಅಲ್ಲಿದ್ದವರೆಲ್ಲಾ ತಮ್ಮ ಜೇಬಿನಿಂದ ಕೊಂಚ ಕೊಂಚ ಚಿಲ್ಲರೆ ದುಡ್ಡು ತೆಗೆದು "ಹೋಗ್ಲಿ, ಎಷ್ಟಾದರೂ ಹೆಣ್ಣೆಂಗ್ಸು. ತೀರಿಕೊಂಡಿದ್ದಾಳೆ. ಸರಿಯಾಗಿ ದಪನ್ ಮಾಡು. ದುಡ್ಡು ಸಿಗ್ತೂಂತ ಹೋಗಿ ಕುಡಿಬೇಡ" ಎಂದು ಹೇಳುತ್ತ ಕೊಟ್ರು. ನಾನೂ ಜೇಬಿನಲ್ಲಿದ್ದ ಚಿಲ್ರೆ ತೆಗೆದುಕೊಟ್ಟು ನಿರ್ಗಮಿಸಿದೆ.

ಈ ಹಿನ್ನೆಲೆಯಿಂದ ಎಂಗ್ಟ ಮೊದಲ ಬಾರಿಗೆ ನನ್ನ ತೋಟಕ್ಕೆ ಪುಂಗಿ ಊದಿ ಹಾವು ಹಿಡಿಯುತ್ತೇನೆಂದು ಬಂದಾಗ ಅವನನ್ನು ತೀವ್ರ ಗುಮಾನಿಯಿಂದ ನೋಡಿದೆ. ಹಾವಾಡಿಗರು ಪುಂಗಿ ಊದಿ ಹಾವಾಡಿಸುವುದನ್ನು ನಾನು ನೋಡಿದ್ದೆನಾದರೂ ಪುಂಗಿ ಊದಿ ಹಾವು ಕರೆದು ಹಿಡಿಯುವುದನ್ನು ನಾನು ನೋಡಿರಲೂ ಇಲ್ಲ. ನಂಬಿರಲೂ ಇಲ್ಲ. ಪುಂಗಿ ಊದಿ ಹಾವು ಕರೆದು ಹಿಡಿಯುತ್ತೇನೆಂದು ಅವನು ಹೇಳಿದಾಗ ಮೊದಲು ಇಲ್ಲಿಂದ ತೊಲಗು ಎಂದು ಜೋರು ಮಾಡಿದೆ. ಕಿವಿಯೇ ಇಲ್ಲದ ಹಾವುಗಳು ಇವನ ಪುಂಗಿಯ ಸಂಗೀತಕ್ಕೆ ಬರುತ್ತವೆನ್ನುವುದು ಪಕ್ಕಾ ಢೋಂಗಿ ಎಂದು ನನ್ನ ತರ್ಕ.

ನನ್ನ ಪ್ರತಿಕ್ರಿಯೆಯಿಂದ ಎಂಗ್ಟ ಕೊಂಚವೂ ನಿರುತ್ಸಾಹಗೊಳ್ಳಲಿಲ್ಲ. ಬಹುಶಃ ಎಷ್ಟೊ ಜನಗಳು ಎಷ್ಟೋ ಸಾರಿ ಅವನಿಗೆ ನನ್ನಂತೆ ಬಯ್ದಿರಬಹುದು. ಜೊತೆಗೆ ಇದೇ ಅವನ ಹೊಟ್ಟೆಪಾಡಾದುದರಿಂದ ಅವನು ತಾಳ್ಮೆ ಕಳೆದುಕೊಳ್ಳುವಂತೆಯೂ ಇರಲಿಲ್ಲ. ತನ್ನ ಕೊಳೆಯಾದ ಕೊಳಕು ಕೋಟಿನ ಜೇಬಿನಿಂದ ಯಾರ್ಯಾರದೋ ಸರ್ಟಿಫಿಕೇಟುಗಳನ್ನು ತೆಗೆದು ಎಂತೆಂಥ ಘಟಸರ್ಪಗಳನ್ನೆಲ್ಲಾ ಹಿಡಿದು ತಾನು ಅವರ ಬಳಿ ಇನಾಮು ತಗೊಂಡಿದ್ದೇನೆಂದು ವಿವರಿಸಿದ. ಅನೇಕ ಸಾರಿ ಮುಟ್ಟಿ ಮಡಿಚಿ ಬಿಚ್ಚಿ ಆ ಸರ್ಟಿಫಿಕೇಟುಗಳು ಜೂಲೆದ್ದು ಮುದಿಯಾಗಿ ತುಂಡು ತುಂಡಾಗಿದ್ದವು. ಅವು ಯಾರವು, ಏನು ಬರೆದಿದ್ದಾರೆ, ನೋಡಲು ಸಾಧ್ಯವೇ ಇರಲಿಲ್ಲ.

ಆವತ್ತು ಎಂಗ್ಟ ಪುಂಗಿ ಊದಿ ಹಲವಾರು ಹಾವುಗಳನ್ನು ನಮ್ಮ ಮನೆಯ ಪಕ್ಕದಲ್ಲೇ ಹಿಡಿದುಬಿಟ್ಟ! ಕಟ್ಟುಹಾವು, ನಾಗರಹಾವು, ಕೊಳಕುಮಂಡಲ ಇತ್ಯಾದಿ ನಾಲ್ಕಾರು ಬಗೆಯ ಹಾವುಗಳನ್ನು ಹಿಡಿದು ಹಲ್ಲು ಮುರಿದು ಬುಟ್ಟಿಗೆ ತುಂಬಿಕೊಂಡ. ಮನೆಯ ಪಕ್ಕದಲ್ಲೇ ತರಗೆಲೆಗಳ ಅಡಿಯಿಂದ, ಹೂವಿನ ಕುಂಡಗಳ ಪಕ್ಕದಿಂದ ಅವನು ಹಾವನ್ನು ಬಾಲ ಹಿಡಿದು ಈಚೆಗೆ ಎಳೆದಿದ್ದನ್ನು ನೋಡಿ ನಾನು ಕಂಗಾಲಾಗಿ ಹೋದೆ. ಎಂಥ ಅಪಾಯಕರ ಸನ್ನಿವೇಶದಲ್ಲಿ ಬದುಕುತ್ತಿದ್ದೇನೆಂದು ಚಿಂತಿಸಿ, ಅವನಿಗೆ ಆಗಾಗ ಬಂದು ಇಲ್ಲಿರುವ ಹಾವುಗಳನ್ನಷ್ಟೂ ಹಿಡಿದು ಹಾಕು ಮಹಾರಾಯ



ಎಂದು ಹೇಳಿದೆ. ನನ್ನ ಕಣ್ಣಿಗೆ ಒಂದೇ ಒಂದು ದಿನವೂ ಕಾಣದಿದ್ದ ಈ ಭಯಂಕರ ವಿಷದ ಹಾವುಗಳು ಅಲ್ಲಿ ಹೇಗೆ ಅಡಗಿದ್ದವು ಎಂದು ಆಶ್ಚರ್ಯಪಟ್ಟೆ.

ಕೊಲೆಗಡುಕನಂತೆ ಕಾಣುತ್ತಿದ್ದ ಎಂಗ್ಟ ಈಗ ಜೀವರಕ್ಷಕನಾಗಿ ಕಾಣತೊಡಗಿದ. ಪುಂಗಿ ಊದಿ ಹಾವು ಹಿಡಿದ ಎಂಗ್ಟನ ಚಮತ್ಕಾರವನ್ನು ಪವಾಡ ನೋಡಿದವನಂತೆ ನಾನು ಇತರರಿಗೆ ತಿಳಿಸಹೋದಾಗ ಕೇಳಿದ ಒಬ್ಬೊಬ್ಬರೂ ಒಂದೊಂದು ತರಹ ಅನುಮಾನಗಳನ್ನು ನನ್ನ ತಲೆಯೊಳಗೆ ಬಿತ್ತಿ ಅಲ್ಲಗಳೆಯತೊಡಗಿದರು.

"ಥೂ ಕಳ್ಳಸೂಳೇಮಗ! ನಿಮ್ಮತ್ರ ಕಾಸು ಕಿತ್ಕೊಳೊದಕ್ಕೆ ಇವೆಲ್ಲಾ ಕಣ್ಕಟ್ಟು ಮಾಡ್ತಾನೆ. ನಮ್ಮ ಹತ್ರ ನೋಡೋಣ ಊದಲಿ ಅವನ ಪುಂಗೀನಾ!" ಎಂದು ಕರಿಯಪ್ಪ ಎಂಗ್ಟನನ್ನು ಜರೆದ.

"ಕಣ್ಕಟ್ಟು ಅಂದರೇನೋ ಕರಿಯಪ್ಪ. ಅವನು ಹಾವು ಹಿಡಿದಿದ್ದನ್ನು ನಾನು ಕಣ್ಣಾರೆ ನೋಡಿದ್ದೀನಿ" ಎಂದೆ.

"ಕಣ್ಕಟ್ಟು ಅಂದ್ರೆ ಮತ್ತೇನಿಲ್ಲ. ಪುಂಗಿ ಊದುತ್ತ ಮೋಡಿ ಹಾಕ್ತಾನೆ. ನಿಮ್ಮ ಕಣ್ಣಿಗೆ ಅವನ ಕೈಯ್ಯಾಗಿರೋ ಬೀಳು, ಬಳ್ಳಿ, ಹಗ್ಗ ಎಲ್ಲ ಹಾವು ತರ ಕಾಣ್ತದೆ. ಅಷ್ಟೇ" ಎಂದ.

ಎಂದರೆ ಅವನ ಅರ್ಥದಲ್ಲಿ ಎಂಗ್ಟ ನನಗೆ ತಾತ್ಕಾಲಿಕ ಮತಿಭ್ರಮಣೆ ಆಗುವ ಹಾಗೆ ಮಾಡುತ್ತಾನೆ ಎಂದು! ಯಾವುದೋ ಹಳ್ಳಿಯಲ್ಲಿ ಹೀಗೇ ಹಾವು ಹಿಡಿಯಲು ಹೋಗಿ ಮೋಡಿ ಹಾಕಿ ಆಮೇಲೆ ಅವರು ದುಡ್ಡು ಕೊಡಲಿಲ್ಲ ಎಂದು ಮೋಡಿ ತೆಗೆಯಲಿಲ್ಲವಂತೆ. ಅವರಿಗೆ ಕಣ್ಣಿಗೆ ಕಂಡ ಬಳ್ಳಿ ಬೀಳುಗಳೆಲ್ಲಾ ಹಾವಿನ ತರ ಕಾಣಿಸಲಾರಂಭಿಸಿದುವಂತೆ. ಕೊನೆಗೆ ಅವನನ್ನು ಹೋಗಿ ಕರೆತಂದು ನ್ಯಾಯವಾಗಿ ಕೊಡಬೇಕಿದ್ದ ದುಡ್ಡು ಕೊಟ್ಟ ಮೇಲೆ ಮೋಡಿ ತಂತಾನೆ ಬಿಟ್ಟುಹೋಯ್ತಂತೆ!.

ಇನ್ನೊಬ್ಬರು, "ಅವನು ಸಾಕಿದ ಹಾವನ್ನು ತಂದು ಮೊದಲೇ ನಿಮ್ಮ ಮನೆ ಹತ್ತಿರ ಗೊತ್ತಿಲ್ಲದ ಹಾಗೆ ಬಿಟ್ಟಿರುತ್ತಾನೆ. ಆಮೇಲೆ ಬಂದು ಪುಂಗಿ ಊದಿ ಅವನ್ನೇ ಹಿಡೀತಾನೆ. ಕಾಡಿನ ಹಾವುಗಳು ಮನುಷ್ಯರು ಕರೆದರೆ ಎಲ್ಲಾದರೂ ಬಂದು ಹಲ್ಲು ಕೀಳಿಸಿಕೋತವ? ಹೊಟ್ಟೆ ಪಾಡಿಗೆ ಇವೆಲ್ಲ ಆಟ ಕಟ್ತಾನೆ ಅವನು" ಎಂದರು.

ಮತ್ತೊಬ್ಬರು, "ಅವನ ಸೊಂಟದಲ್ಲಿ ಹಾವು ಸುತ್ತಿಟ್ಕೊಂಡಿರ್ತಾನೆ. ಪುಂಗಿ ಊದುತ್ತಾ ನೀವು ಅತ್ಲಾಗಿತ್ಲಾಗಿ ನೋಡಿದಾಗ ಮೆಲ್ಲಗೆ ಅವನ್ನ ಬಿಟ್ಟು ಆಮ್ಯಾಲೆ

ಹಿಡೀತಾನೆ. ನೀವೇನು ಅವನ ಮೈಕೈ ಸೊಂಟ ಎಲ್ಲ ಮುಟ್ಟಿ ನೋಡಿ ಪರೀಕ್ಷೆ ಮಾಡಿದಿರ?" ಎಂದರು.

"ಏನ್ ಸ್ಸಾರ್! ನಿಮ್ಮಂಥಾ ಎಜುಕೇಟೆಡ್ಡು, ವಿಚಾರವಾದಿಗಳು, ಸೈಂಟಿಫಿಕ್ಕಾಗಿ ಯೋಚಿಸೋರು, ಧರ್ಮಸ್ಥಳಕ್ಕೆ ಹೋಗಿ ತಲೆ ಬೋಳಿಸಿಕೊಳ್ಳೋರನ್ನ ಲೇವಡಿ ಮಾಡ್ತಿದ್ರಿ! ನೀವೇ ಹೀಗೆ ಮೋಸಹೋದರೆ ಇನ್ನು ಹಳ್ಳಿಯವರು ಮಂತ್ರ ತಂತ್ರ ದೈಯ್ಯಾ ದ್ಯಾವರು ಅನ್ನೋದರಲ್ಲಿ ಆಶ್ಚರ್ಯವಿಲ್ಲ ಬಿಡಿ. ಹಾವು ಸಂಗೀತ ಕೇಳಿ ಹತ್ತಿರ ಬರ್ತವೆ ಅಂತ ಅವನು ಹೇಳಿದರೆ ನೀವು ನಂಬ್ತೀರಲ್ಲಾ! ಹಾವಿಗೆ ಕೇಳೋದಕ್ಕೆ ಕಿವಿಯೇ ಇಲ್ಲಾ ಅನ್ನೋ ಸಿಂಪಲ್ ಫ್ಯಾಕ್ಟ್ ನಿಮಗೆ ಹೊಳೀಲಿಲ್ವ?" ಎಂದು ಸಂಶೋಧನ ಕೇಂದ್ರದ ವಿಜ್ಞಾನಿ ಮಿತ್ರರು ಸಾಮೂಹಿಕವಾಗಿ ಅಪಹಾಸ್ಯ ಮಾಡಿದರು.

ಒಟ್ಟಿನಲ್ಲಿ ನಾನು ಎಂಗ್ಟನ ವಿಚಾರ ಎತ್ತಿದಾಗೆಲ್ಲ ನನ್ನ ಮಿತ್ರರು ನಾನು ಮತಾಂತರ ಹೊಂದಿದವನಂತೆ ಪರಿಗಣಿಸಿ ನನ್ನನ್ನು ಟೀಕಿಸಿದರು. ಎಂಗ್ಟ ನನ್ನನ್ನು ಪರಿವರ್ತನೆ ಮಾಡಿದ ಮೂಢ ನಂಬುಗೆಗಳ ವಕ್ತಾರನಾದ.

ನನಗೆ ಆವರೆಗೂ ನಮ್ಮ ಮನೆ ಬಳಿ ಇದ್ದ ಆ ಭೀಕರ ವಿಷ ಸರ್ಪಗಳನ್ನು ಹಿಡಿದೊಯ್ದು ನನ್ನನ್ನು ದುರ್ಮರಣದಿಂದ ರಕ್ಷಿಸಿದನಲ್ಲಾ ಎಂದು ಎಂಗ್ಟನ ಬಗ್ಗೆ ಇದ್ದ ಕೃತಜ್ಞತೆ ಎಲ್ಲಾ ಇವರು ಬಿತ್ತಿದ ಸಂಶಯಗಳಿಂದ ನಿಧಾನವಾಗಿ ಕರಗತೊಡಗಿತು. ಎಂಗ್ಟನ ಚುರುಕು ಮಾತು, ಚಟುವಟಿಕೆ, ಚಾಲಾಕುಗಳನ್ನು ಗಮನಿಸಿದ್ದ ನನಗೆ ಇವನು ಮೋಸಗಾರನಿದ್ದರೂ ಇರಬಹುದೆನ್ನಿಸಿತು. ನಾಗರಹಾವು ಹಿಡಿದರೆ ಒಂದು ರೂಪಾಯಿ, ಇತರ ಹಾವುಗಳನ್ನು ಹಿಡಿದರೆ ಎಂಟಾಣೆ ಎಂದು ಮಾತಾಡಿ ನನ್ನ ಹತ್ತಿರ ನಾಲ್ಕಾರು ರೂಪಾಯಿ ಕಿತ್ತಿದ್ದ. ದುಡ್ಡು ಹೋಗಿದ್ದಕ್ಕೆ ನನಗೇನೂ ಚಿಂತೆ ಇರಲಿಲ್ಲ. ಆದರೆ ನನಗೆ ಮಂಕುಬೂದಿ ಎರಚಿ ಮೋಸ ಮಾಡಿದನಲ್ಲ ಎಂಬುದು ಮನಸ್ಸಿನಲ್ಲಿ ಕಾಡತೊಡಗಿತು.

ಎಂಗ್ಟ ಹೊಟ್ಟೆಪಾಡಿಗಾಗಿ ಬಂದು ಹಾವು ಹಿಡಿದು ಹೋಗಿದ್ದು ನಿಧಾನವಾಗಿ ನನ್ನಲ್ಲಿ ಅನೇಕ ಬಗೆಯ ತಾತ್ವಿಕ ಸಮಸ್ಯೆಗಳನ್ನು ಎಳಿಸತೊಡಗಿತು.

ಇನ್ನೊಮ್ಮೆ ಅವನು ಈ ಕಡೆ ತಲೆಹಾಕಿದರೆ ಅವನ ಕಣ್ಕಟ್ಟನ್ನು ಬಯಲು ಮಾಡಿ ಅವನಿಗೆ ಚೆನ್ನಾಗಿ ಉಗಿದು, ಒಂದು ಪೈಸಾ ಸಹ ಕೊಡದೆ ಓಡಿಸಬೇಕೆಂದು ನಿಶ್ಚೈಸಿದೆ. ಅವನನ್ನು ಯಾವ್ಯಾವ ರೀತಿಯಲ್ಲಿ ಪರೀಕ್ಷೆಗೆ ಒಡ್ಡಬೇಕೆಂದು ನನ್ನ ಗೆಳೆಯರಾದ ಕೀಟಶಾಸ್ತ್ರ ಸಿದ್ದಪ್ಪಾಜಿ ಬಳಿ ಸಮಾಲೋಚನೆ ನಡೆಸಿದೆ. ನನಗೆ ಮುಖ್ಯವಾಗಿ ಮೋಡಿ ಮಾಡಿ ಮತಿಭ್ರಾಂತಿ ಹಿಡಿಸುತ್ತಿದ್ದರೆ ಹೇಗೆ ಪತ್ತೆ ಮಾಡುವುದು



ಎಂಬುದೇ ಚಿಂತೆಯಾಗಿತ್ತು. ಅವನು ಹಾವು ಹಿಡಿಯುವುದರ ಫೋಟೋ ತೆಗೆಯಬೇಕೆಂದೂ, ಮನುಷ್ಯರ ಕಣ್ಣುಗಳಿಗೆ ಮೋಡಿ ಹಾಕಿದರೂ ಕ್ಯಾಮರ ಲೆನ್ಸಿಗೆ ಮೋಸ ಮಾಡಲು ಸಾಧ್ಯವಿಲ್ಲವೆಂದೂ ತೀರ್ಮಾನಿಸಿದೆವು.

ಎಂಗ್ಟ ಈಗ ಮತ್ತೆ ಮೋಸಗಾರನೂ ಕೊಲೆಪಾತಕಿಯೂ ಆಗಿ ಕಾಣತೊಡಗಿದ. ಆದರೆ ಎಂಗ್ಟ ತುಂಬಾ ದಿನಗಳವರೆಗೆ ಬರಲೇ ಇಲ್ಲ. ಮೂಡಿಗೆರೆಯ ಚಿಕ್ಕ ಬಯಲಿನಲ್ಲಿ ಅವನು ಹಾಕಿದ್ದ ಗುಡಾರ ಮಾಯವಾಗಿತ್ತು. ಅವನು ಬೇರೆಲ್ಲೊ ತಿರುಗಲು ಹೋಗಿದ್ದಾನೆಂದು ಊಹಿಸಿದೆ. ಅವನ ಜಾತಿಯವರೇ ಹಾಗೆ. ಕರ್ನಾಟಕದ ಉದ್ದಗಲಕ್ಕೆ ಎಲ್ಲೆಲ್ಲೋ ತಿರುಗುತ್ತಾ ಇರುತ್ತಾರೆ. ನನಗೆ ಈ ಹದಿನೈದು ವರ್ಷದ ಅವಧಿಯಲ್ಲಿ ಅವನು ಧಾರವಾಡ, ಹರಿಹರ, ಹುಣಸೂರು, ಹೊಳೆನರಸೀಪುರ ಇಲ್ಲೆಲ್ಲಾ ಕಾಣಸಿಕ್ಕಿದ್ದಾನೆ. ಈಗ ಇನ್ನೊಂದು ಮದುವೆಯಾಗಲು ಯೋಚಿಸುತ್ತಿದ್ದ ಅವನು ಯಾರಾದರೂ ಅವರ ಕಡೆಯವರನ್ನು ಹುಡುಕಿಕೊಂಡು ಹೋಗಲೇಬೇಕಿತ್ತು. ವಿಳಾಸವಿಲ್ಲದ ಅವರನ್ನು ಹೇಗೆ ಹುಡುಕುತ್ತಾನೋ ಏನೋ!

ನಾನು ಅವನ ಮೋಸವನ್ನು ಬಯಲು ಮಾಡಬೇಕೆಂದು ಕಾಯುತ್ತಿದ್ದಾಗ ಒಮ್ಮೆ ನನಗೆ ಸಕಲೇಶಪುರದಲ್ಲಿ ಕಂಡ. ರಸ್ತೆ ಪಕ್ಕ ಏನೇನೋ ಗಿಡ ಮೂಲಿಕೆಗಳನ್ನು ರಾಶಿ ಹಾಕಿಕೊಂಡು ತುರುಗಜ್ಜಿ, ಇಸುಬು, ಹಾವು ಕಚ್ಚಿದ್ದಕ್ಕೆ ಎಂದು ಭಾಷಣ ಬಿಗಿದು ಮಾರುತ್ತಿದ್ದ. ಅವನ ಪಕ್ಕದಲ್ಲಿ ಹದ ಹಾಕಿದ ಹಾವಿನ ಚರ್ಮಗಳು ಉದ್ದಕ್ಕೆ ಹಾಸಿದ್ದವು. ವಿದೇಶೀ ಪ್ರವಾಸಿಗರಿದ್ದಲ್ಲಿ ಮಾತ್ರ ಅದಕ್ಕೆ ಗಿರಾಕಿಗಳು.

ಅವನ ಪಕ್ಕದಲ್ಲೇ ದಾಸರಹಾವು ದೊಡ್ಡ ಮೂಟೆಯಂತೆ ಪಿಂಡಿ ಸುತ್ತಿಕೊಂಡು ಬಿದ್ದಿತ್ತು. ಅದಂತೂ ಯಾವ ಚಲನೆಯೂ ಇಲ್ಲದ ನಿರ್ಜೀವ ಜಂತುವಿನಂತೆ ಕಾಣುತ್ತಿತ್ತು. ಅದರ ಸುತ್ತಿನೊಳಗಿಂದ ಇಣುಕುತ್ತಿದ್ದ ತಲೆಯ ತುದಿಯಲ್ಲಿ ಆಗಾಗ ಮಿಂಚಿನಂತೆ ಹೊರಬರುತ್ತಿದ್ದ ಸೀಳು ನಾಲಿಗೆಯೊಂದೇ ಅದರ ಸಜೀವತೆಗೆ ಸಂಕೇತವಾಗಿತ್ತು. ಪುಂಗಿ ಊದಿದರೆ ಅದೇನೂ ತಲೆಯಾಡಿಸುವ ಹಾವಿನಂತೆ ಕಾಣಲಿಲ್ಲ. ಈ ಬಡ ಪ್ರಾಣಿಯನ್ನು ಎಂಗ್ಟ ಕೇವಲ ಜನರನ್ನು ಆಕರ್ಷಿಸಲು ಮಾತ್ರ ಇರಿಸಿಕೊಂಡಿದ್ದನೆಂದು ತೋರುತ್ತದೆ. ಅದನ್ನು ನೋಡಲು ಬಂದವರಿಗೆಲ್ಲ ಇವನು ಏನನ್ನಾದರೂ ಹೇಳಿ ಗಿಡಮೂಲಿಕೆ ಮಾರಲು ಯತ್ನಿಸುತ್ತಿದ್ದ.

ನಾನು ಅವನ ಗುಂಪಿನ ಹತ್ತಿರ ಹೋಗಲಿಲ್ಲ. ಅಲ್ಲಿ ಹೋದರೆ ಏನಾದರೂ ಒಂದು ಹೇಳಿ ಹಣ ಕೇಳಲು ಶುರು ಮಾಡುತ್ತಾನೆ. ಸಾರ್ವಜನಿಕವಾಗಿ ಅವನ ಹತ್ತಿರ ಚೌಕಾಶಿ ವಾಗ್ವಾದ ಇತ್ಯಾದಿಗಳನ್ನು ಮಾಡಲು ನನಗೆ ಇಷ್ಟವಿರಲಿಲ್ಲ.

ಅವನ ಹಾವು ಹಿಡಿಯುವ ಢೋಂಗಿ ಬಗ್ಗೆ ಹೇಳಿ ಬಯ್ಯಬೇಕೆಂದು ನಾಲಿಗೆ ಕಡಿಯುತ್ತಿದ್ದರೂ ಅದನ್ನು ತಡೆದುಕೊಂಡು ಸುಮ್ಮನಾದೆ.

ಎಂಗ್ಟನನ್ನು ದೂರದಿಂದ ನೋಡಿದಾಗ ಪಾಪ ಎನ್ನಿಸಿತು. ನಾಗರಿಕತೆ ಮುಂದುವರಿಯುತ್ತಾ ಎಂಗ್ಟನ ಕುಲಕಸುಬುಗಳು, ಕೈ ಚಳಕಗಳು ನಿಧಾನವಾಗಿ ನಿರುಪಯುಕ್ತವಾಗುತ್ತಿದ್ದವು. ಸರ್ಕಾರ ಹಾವಿನ ಚರ್ಮವನ್ನು ರಫ್ತುಮಾಡುವುದು ನಿಷೇಧಿಸಿದ ಮೇಲೆ ಅವನ ಚರ್ಮಗಳಿಗೆ ದುಡ್ಡು ಸಿಗುತ್ತಿರಲಿಲ್ಲ. ಅವನ ಚಕ್ರಾಣಿ, ಬೇರು, ಚಿತ್ರಮೂಲದ ಬೇರು, ಸರ್ಪಗಂಧಿ, ಅಳಲೆಕಾಯಿಗಳು ವಿಲಾಯಿತಿ ಔಷಧಿಯ ಎದುರು ಗಿರಾಕಿ ಕಳೆದುಕೊಂಡಿದ್ದುವು. ಮೊದಲಿನಂತೆ ಮೊಲ, ಕೌಜುಗನ ಹಕ್ಕಿ, ನೀರು ನಾಯಿಗಳನ್ನು ಬೇಟೆಯಾಡುವುದಕ್ಕೂ ಅರಣ್ಯ ಇಲಾಖೆಯವರು ಅವಕಾಶ ಕೊಡುತ್ತಿರಲಿಲ್ಲ.

ಎಂಗ್ಟನಿಗೆ ಮನಸ್ಸಿನಾಳದಲ್ಲಿ ತಾನು ಪರಕೀಯನಾಗುತ್ತಾ, ಏಕಾಂಗಿಯಾಗುತ್ತಾ ಇರುವುದರ ಅರಿವಿದ್ದಿರಬಹುದು. ಅವನು ತನ್ನೆಲ್ಲಾ ಚಾಕಚಕ್ಯತೆ ಚಾಲಾಕುಗಳನ್ನು ಉಪಯೋಗಿಸಿ ಜನರನ್ನು ರಂಜಿಸಿ, ನಂಬಿಸಿ, ನಿದ್ದೆ ಮಾಡುತ್ತಿದ್ದ ದಾಸರಹಾವಿನ ಎದುರು ಪುಂಗಿ ಊದಿ, ಊಟ ಸಂಪಾದನೆ ಮಾಡಲು ಹೆಣಗುತ್ತಿದ್ದುದನ್ನು, "ಕಣ್ಕಟ್ಟು ಸೂಳೆಮಗ" ಎಂದು ಜನರು ಬೈದರೂ ತಾಳ್ಮೆಯಿಂದ ಸಹಿಸಿಕೊಂಡು ಉತ್ತರಿಸುತ್ತಿದ್ದುದನ್ನು ನೋಡಿದ್ದೇನೆ. ಭಾರತದ ಕಾಡುಗಳೂ ಮೃಗಪಕ್ಷಿಗಳೂ ನದಿ, ಝರಿಗಳೂ, ತಾಳ್ಮೆಯಿಂದ ತಮ್ಮ ಅವಸಾನವನ್ನು ಕಾಯುತ್ತಿರುವಂತೆಯೇ ಎಂಗ್ಟನೂ ಕಾಯುತ್ತಿದ್ದ. ಇತಿಹಾಸ ಎಂದೋ ಅವನ ಭವಿಷ್ಯವನ್ನು ತೀರ್ಮಾನ ಮಾಡಿತ್ತು. ಸೋಲಲೇಬೇಕಾದ ಯುದ್ಧ ಒಂದರಲ್ಲಿ ಗುದ್ದಾಡುತ್ತಾ ಬೀದಿ ಬದಿಯಲ್ಲಿ ಅವನು ನಿಂತಿದ್ದ.

೩

ಎಂಗ್ಟ ಇನ್ನೊಮ್ಮೆ ನನಗೆ ಸಿಕ್ಕುವುದಕ್ಕೆ ಮೊದಲು ಸಂಶೋಧನಾ ಕೇಂದ್ರದ ವಿಜ್ಞಾನಿಗಳೊಬ್ಬರು ಎಂಗ್ಟ ಎಲ್ಲಿ ಸಿಗುತ್ತಾನೆಂದೂ ವಿಚಾರಿಸಿಕೊಂಡು ನನ್ನ ಬಳಿಗೆ ಬಂದಿದ್ದರು. ಕಾರಣ ಇಷ್ಟೇ, ಅವರ ಆಫೀಸಿನೊಳಗೆ ಹಾವೊಂದು ಬಂದುಬಿಟ್ಟಿತ್ತು. ಸಿಮೆಂಟ್ ನೆಲದ ಮೇಲೆ ಸರಿಯಾಗಿ ಹರಿದಾಡಲಾರದ ಹಾವು ಮುಂದುವರೆಯಲು ಕಷ್ಟಪಡುತ್ತಿರಬೇಕಾದರೆ ಮಿಕ್ಕವರೆಲ್ಲ ಇದು ಯಾರನ್ನೋ ಕಚ್ಚುವ ಉದ್ದೇಶದಿಂದಲೇ ಹೀಗಾಡುತ್ತಿದೆಯೆಂದು ಶಂಕಿಸಿ ಆಫಿಸು ಬಿಟ್ಟು ಓಡಿದರು. ಹಾವಿಗೂ ಸಾವಿಗೂ ಸಂಬಂಧ ಇರುವುದರಿಂದ ಅದನ್ನು ನೋಡಿದರೆ ಎಲ್ಲರಿಗೂ ಎಷ್ಟು ಭಯ!.



"ಅಲ್ರಿ ಆಫೀಸಿನೊಳಗೆ ಬಂದ ಹಾವನ್ನು ಹಿಡಿದು ಸಾಯಿಸಲು ಎಂಗ್ಟ ಯಾಕ್ರೀ? ಕಾಡೊಳಗೆ ಪೊದೆಗಳಲ್ಲೋ, ಹುತ್ತದಲ್ಲೋ ಅಡಗಿ ಕುಳಿತಿರುವ ಹಾವಾದರೆ ಪುಂಗಿ ಊದಿ ಕರೆಯಲು ಎಂಗ್ಟನಿಗೆ ಹೇಳಬಹುದು. ಇದನ್ನು ನೀವೇ ಯಾರಾದರೂ ಹೊಡೆಯಬಹುದಿತ್ತಲ್ಲ" ಎಂದು ಆಮೇಲೆ ಕೇಳಿದೆ.

ಒಬ್ಬ, "ನನ್ನ ಹೆಂಡತಿ ಬಸುರಿ. ನಾನು ಈಗ ಮಾತ್ರ ಹಾವು ಹೊಡೆಯುವ ಹಾಗೇ ಇಲ್ಲ" ಎಂದರಂತೆ.

ಇನ್ನೊಬ್ಬ, "ಅಯ್ಯಯ್ಯೋ ನಾನು ಲಿಂಗಾಯತ. ಹಾವು ನಮಗೆ ದೇವರು. ಎಲ್ಲಾ ಬಿಟ್ಟು ಅದನ್ನು ಹೊಡೆಯೋದಕ್ಕೆ ನನಗೆ ಹೇಳ್ತಿದಿರಲ್ಲ. ಒಳ್ಳೆ ಚೆನ್ನಾಯ್ತು" ಎಂದು ನಿರಾಕರಿಸಿದರಂತೆ.

ಮತ್ತೊಬ್ಬರು, "ಅದು ಎಂಡೇಂಜರ್ಡ್ ಸ್ಪೀಷಿ ಶೆಡ್ಯೂಲ್‌ನಲ್ಲಿ ಸೇರಿದೆ. ಅದನ್ನು ಹೊಡೆದು ಸಾಯಿಸುವುದು ಕಾನೂನಿಗೆ ವಿರುದ್ಧ" ಎಂದು ಘೋಷಿಸಿದರಂತೆ.

ಒಟ್ಟಿನಲ್ಲಿ ಎಲ್ರೂ ಕಾನೂನಿಗೂ, ಮನಸ್ಸಾಕ್ಷಿಗೂ ಹೆದರಿ ಆಫೀಸು ಬಿಟ್ಟು ಓಡಿದರು. ಆ ಸಮಯದಲ್ಲಿ ಯಾರೋ ನಾನು ಹಾವು ಹಿಡಿಯುವವನ ಬಗ್ಗೆ ಹೇಳುತ್ತಿದ್ದುದನ್ನು ಜ್ಞಾಪಿಸಿದರಂತೆ. ಅದಕ್ಕೆ ಎಂಗ್ಟ ಎಲ್ಲಿದ್ದಾನೆಂದು ತಿಳಿಯಲು ನನ್ನ ಬಳಿಗೆ ಜನ ಕಳಿಸಿದ್ದರು.

ನಾನು ಸಂಶೋಧನಾ ಕೇಂದ್ರದ ಬಳಿ ಹೋದಾಗ ಹೊರಗಡೆ ಜೇನು ಪೆಟ್ಟಿಗೆಗಳು, ರೇಷ್ಮೆಹುಳು ಗೂಡು ಕಟ್ಟುವ ಚಂದ್ರಿಕೆಗಳು, ಪುರಾತನ ಕಾಲದ ಫೈಲುಗಳು, ಪುಸ್ತಕಗಳು ಇವೆಲ್ಲದರ ಒಂದು ದೊಡ್ಡ ಗುಡ್ಡ ಆಫೀಸೆದುರು ಬಿದ್ದಿತ್ತು. ಹಾವು ಒಳಗೆ ಬಂದ ಕೂಡಲೇ ಎಲ್ಲಾ ಸಿಬ್ಬಂದಿಯು ಜಾಗ ಖಾಲಿ ಮಾಡಿದ್ದರು. ಹಾಗಾಗಿ ಹಾವು ಹೊರಗೆ ವಾಪಸ್ಸಾದುದನ್ನು ಯಾರೂ ನೋಡಿರಲಿಲ್ಲ. ಕೊಂಚ ಹೊತ್ತಿನ ತರುವಾಯ ಒಳಗೆ ಹೋದವರಿಗೆ ನಿರಂತರ ಪ್ರಾಣ ಭಯ. ಯಾವ ಕ್ಷಣ ಯಾವ ಫೈಲಿನೊಳಗಿಂದ, ಯಾವ ಡ್ರಾ ಒಳಗಿನಿಂದ ಹಾವು ಚಿಮ್ಮಿ ತಮ್ಮ ಮೇಲೆ ದಾಳಿ ಮಾಡುತ್ತದೋ ಎನ್ನುವ ಭೀತಿ. ಕೊನೆಗೆ ಈ ದಿಗಿಲಿನಲ್ಲಿ ಕೆಲಸ ಮುಂದುವರೆಸಲಾರದೆ ಆಫೀಸಿನ ಸಾಮಾನುಗಳನ್ನು ಫೈಲುಗಳನ್ನು ಹೊರಗೆ ಹಾಕಿಕೊಂಡು "ಥರೋ ಚೆಕಪ್" ಮಾಡುತ್ತಿದ್ದರು. ಕೆಲವರು ಸ್ಟೋರಿನಲ್ಲಿಟ್ಟಿರುವ ಏಲಕ್ಕಿ ವಾಸನೆಗೆ ಅವು ಬರುತ್ತವೆಂದೂ, ಕೆಲವರು ಆಫೀಸಿನಲ್ಲಿ ಸೇರಿಕೊಂಡಿರುವ ಇಲಿ ಹಿಡಿಯಲು ಬರುತ್ತವೆಂದೂ ವಾದ ಮಾಡುತ್ತಿದ್ದರು.

ಈ ಘಟನೆಯಿಂದ ನನಗಾದ ಒಂದು ಅನುಕೂಲ ಎಂದರೆ ನನ್ನ ವಿಜ್ಞಾನಿ ಮಿತ್ರರು ಹಾವು ಗೊಲ್ಲರ ಎಂಗ್ಟನ ವಿಷಯ ಎತ್ತಿ ನನ್ನನ್ನು ಟೀಕಿಸುವುದು ಕಡಿಮೆ ಮಾಡಿದರು.

ಎಂಗ್ಟ ನನಗೆ ಎರಡನೆಯ ಸಾರಿ ಸಿಕ್ಕಾಗ ಈ ಘಟನೆಯಿಂದಾಗಿ ಎಷ್ಟೋ ದಿನ ಕಳೆದಿತ್ತು. ಎಂಗ್ಟನಿಗೆ ನನ್ನ ಧೋರಣೆಯಲ್ಲಾದ ಬದಲಾವಣೆ ನನ್ನ ಮಾತಿನ ಧಾಟಿಯಿಂದಲೇ ಗೊತ್ತಾಯ್ತು.

"ನೀನು ಮೊದಲೇ ಹಿಡಿದ ಹಾವುಗಳನ್ನು ತಂದುಬಿಟ್ಟು ಮತ್ತೆ ಹಿಡಿದಿದ್ದೀಯ ಅನ್ನುವುದರಲ್ಲಿ ಅನುಮಾನವೇ ಇಲ್ಲ. ಇಲ್ಲದಿದ್ದರೆ ನನ್ನ ಕಣ್ಣಿಗೆ ಒಂದೇ ಒಂದು ದಿನ ಕಾಣದಿದ್ದ ಅಷ್ಟೊಂದು ಹಾವುಗಳನ್ನು ನೀನು ಹಿಡಿದಿದ್ದಾದರೂ ಹೇಗೆ ಹೇಳು?" ಎಂದು ಕೂಗಾಡಿದೆ.

"ಎಲ್ಲಿ ಸ್ವಾಮಿ ನಾನು ನಿಮ್ಮನೆ ಹತ್ರ ಹಾವು ಬಿಡೋದಕ್ಕೆ ಬಂದಿದ್ದೆ? ರಾತ್ರೆ ತಗೊಂಡು ಬಂದು ಬಿಟ್ಟರೆ ಬೆಳತನಕ ಅವು ನನ್ನ ಕಾಯ್ತಾ ಕೂತಿರ್ತವ? ಈಗಲೂ ನನ್ನ ಬುಟ್ಟಿ ಒಳಗೆ ಎರಡು ನಾಗರಹಾವಿದೆ. ಕೃಷ್ಣೇಗೌಡರ ತೋಟದಲ್ಲಿ ನಿನ್ನೆ ಹಿಡಿದಿದ್ದು. ಬಿಟ್ಟು ಪುಂಗಿ ಊದುತ್ತೇನೆ, ನೀವೇ ನೋಡಿ. ಪುಂಗಿ ಸದ್ದು ಕೇಳಿದರೆ ಕಾಡಿಗೆ ಓಡುತ್ತವೆಯೇ ಹೊರ್ತು ಹತ್ರ ಬರೋದಿಲ್ಲ" ಎಂದು ಹೇಳಿ ಬುಟ್ಟಿಯೊಳಗಿನ ಹಾವುಗಳನ್ನು ಹೊರಬಿಟ್ಟು ಪುಂಗಿ ಊದಿದ. ಅವು ಅತ್ತಿತ್ತ ನುಸುಳು ಪರಾರಿಯಾಗಲು ಪ್ರಯತ್ನಿಸುತ್ತಿದ್ದವು. ನಾನೇ ಅವೆಲ್ಲಾದರೂ ತಪ್ಪಿಸಿಕೊಂಡಾವೆಂದು ಹಿಡಿದು ಬುಟ್ಟಿಗೆ ಹಾಕಿಕೋ ಎಂದೆ.

"ಹಂಗಾದರೆ ನೀನು ಕರಿಯಪ್ಪ ಹೇಳಿದ ಹಾಗೆ ಕಣ್ಕಟ್ಟು ಮಾಡಿ ಮೋಡಿ ಹಾಕ್ತಿದಿಯಾ ಅಷ್ಟೆ" ಎಂದೆ.

"ಕರಿಯಪ್ಪಣ್ಣಾರು ಹೇಳಿದ್ರಾ? ಅವರಿಗೇನ್ಸಾಮಿ ಮಾತಾಡೋದಕ್ಕೆ. ನಿಮ್ಮೊಬ್ರತ್ರಾ ಅಲ್ಲ. ಎಲ್ಲಾ ಕಡೆನೂ ಹಂಗೇ ಹೇಳಿದಾರೆ ಅವ್ರು. ಮೋಡಿ ಕಣ್ಕಟ್ಟು ಗೊತ್ತಿದ್ರೆ ಹಾವು ಹಿಡಿದು ನಿಮ್ಮತ್ರ ಕಾಸಿಗೆ ಕೈಚಾಚಬೇಕಾ. ಮೋಡಿ ಹಾಕಿ ದುಡ್ಡಿನ ಗಂಟು ತಂದು ನನ್ನ ಜೋಳಿಗೆ ಒಳಗೆ ಹಾಕೋ ಹಂಗೆ ಮಾಡ್ತಿರಲಿಲ್ವ? ಕರಿಯಪ್ಪಣ್ಣಾರ ಮಾತು ಕೇಳಿಕೊಂಡು ಸುಂಸುಮ್ನೆ ನನ್ಮೇಲೆ ಎಗರಾಡಬೇಡಿ".

"ಮತ್ತೆ ಹಾವಿಗೆ ಕಿವಿ ಎಲ್ಲಿದೆ ತೋರ್ಸು. ಕಿವಿನೆ ಇಲ್ದಿರೋ ಪ್ರಾಣಿ ನಿನ್ನ ಸಂಗೀತ ಕೇಳಿಕೊಂಡು ಬರುತ್ತ?".



"ಅಲ್ಲಾ ಸ್ವಾಮಿ ನಮ್ಮಂಗೆ ಕಿವಿ ಇಲ್ದಿದ್ರೆ ಶಬ್ದಾನೆ ಕೇಳಿಸೊಲ್ವ ಹಾವಿಗೆ? ಹಂಗಾರೆ ನಮ್ಮಂಗೆ ಕಾಲಿಲ್ಲ ಹಾವಿಗೆ, ಹಾಗಂತ ಓಡಾಡೋಕೆ ಬರೋದಿಲ್ವ ಹಾವಿಗೆ? ಅದೆಲ್ಲಾ ಆ ಸ್ವಾಮಿ ಮಾಡಿರೋ ಇಚಿತ್ರ ಸ್ವಾಮಿ. ಇಷ್ಟೊಂದು ತಿಳಿದೋರು, ಓದಿದೋರು, ಹಳ್ಳಿ ಜನಗಳ ಹಂಗೆ ಮಾತಾಡಿದರೆ ಹೇಗೆ ಸ್ವಾಮಿ!".

ನನ್ನ ವಿಜ್ಞಾನಿ ಮಿತ್ರರು ನನ್ನ ಬಳಿ ಎತ್ತಿದ್ದ ಸಂದೇಹಗಳಿಗೆಲ್ಲಾ ಚಟಪಟ ಕರಾರುವಕ್ಕಾಗಿ ತನ್ನದೇ ಆದ ರೀತಿಯಲ್ಲಿ ಎಂಗ್ಟ ಉತ್ತರ ಹೇಳುತ್ತಿದ್ದ. ಒಟ್ಟಿನಲ್ಲಿ ಈ ವಿಜ್ಞಾನಿ ಮಿತ್ರರು ಮತ್ತು ಎಂಗ್ಟನ ನಡುವೆ ಸಿಕ್ಕಿಕೊಂಡು ಮೂಢನಾದವನು ನಾನು. ಇಬ್ಬರೂ ನನ್ನನ್ನು ಹಳ್ಳಿಯವರಂತೆ ಮಾತಾಡುತ್ತೀರಲ್ಲ ಎಂದು ಲೇವಡಿ ಮಾಡಿದ್ದರು. ಎಂಗ್ಟನ ಹತ್ತಿರ ವಾದ ಮಾಡಿ ತರ್ಕದಿಂದ ಸೋಲಿಸುವುದು ಸಾಧ್ಯವಿಲ್ಲ ಎನ್ನಿಸಿತು. ಅವನು ಹಾವು ಹಿಡಿಯುತ್ತಲೇ ಅವನ ಮೋಸ ಬಹಿರಂಗ ಮಾಡಬೇಕೇ ಹೊರತು ನನ್ನ ವಿಧಾನ ಸರಿಯಲ್ಲವೆಂದು ತೀರ್ಮಾನಿಸಿದೆ. ಮಂತ್ರ ಮಾಟ ಇವನಿಗೆ ಗೊತ್ತೋ ಇಲ್ಲವೋ! ಮಾತಲ್ಲಂತೂ ಮೋಡಿ ಹಾಕುತ್ತಿದ್ದುದು ನಿಜ. ಏನೇ ಆಗಲಿ ಇವನ ಮಾತಿನ ಚಲಾಕಿಗೆ ನಾನು ಮರುಳಾಗಬಾರದೆಂದು ತೀರ್ಮಾನಿಸಿ ಮೊದಲೇ ನಾನು ಯೋಚಿಸಿದ್ದ ಪರೀಕ್ಷೆಗಳನ್ನೆಲ್ಲಾ ಆರಂಭಿಸಿದೆ. ಅವನು ಸೊಂಟದಲ್ಲಿ ಹಾವುಗಳನ್ನು ಸುತ್ತಿಟ್ಟುಕೊಂಡಿದ್ದಾನೆಯೇ ಪರೀಕ್ಷಿಸಿದೆ. ಎಂಥವೋ ನಾರು ಬೇರುಗಳನ್ನು ಗಂಟುಕಟ್ಟಿ ಇಟ್ಟುಕೊಂಡಿದ್ದನೇ ಹೊರತು ಹಾವು ಯಾವುದೂ ಕಾಣಲಿಲ್ಲ. "ನಿಮಗೆ ಅಷ್ಟೊಂದು ಅನುಮಾನ ಇದ್ದರೆ ಪಂಚೆ ಬಿಚ್ಚಿಟ್ಟು ಬೇಕಾದರೆ ಬರೇ ಲಂಗೋಟಿಯಲ್ಲಿ ಹಾವು ಹಿಡಿಯುತ್ತೇನೆ" ಎಂದು ಹೇಳಿದ.

ಎಂಗ್ಟ ಪುಂಗಿ ಹೊರತೆಗೆದಾಗ, "ಅದನ್ನು ಯಾರು ಊದಿದರೂ ಬರ್ತವ? ಇಲ್ಲಾ ನೀನು ಊದಿದರೆ ಮಾತ್ರ ಬರೋದ?" ಎಂದು ಕೇಳಿದೆ.

"ಇದ್ನ ಯಾರು ಊದಿದರೂ ಬರ್ತವೆ ಸ್ವಾಮಿ. ಆದರೆ ಅದನ್ನು ಪತ್ತೆಮಾಡಿ ಹಿಡಿಯೋದಕ್ಕೆ ಬಲೇ ಚುರುಕು ಕಣ್ಣು ಬೇಕು. ಅವು ಎಲ್ಲೋ ಕಸದ ಸಂದೀಲಿ ತಲೆಹಾಕಿ ನೋಡಿ ಹಂಗೇ ವಾಪಸ್ ಓಡೋಗಿಬಿಡ್ತವೆ. ಹಾಸನದ ಸಿನೆಮಾ ಟಾಕೀಸಲ್ಲಿ ನಾಗಿನ್ ಹಾಡು ಹಾಕಿದಾಗ ನಾಗರಹಾವು ಟಾಕೀಸ್ ಒಳಗೇ ಬಂದು ಬಿಡ್ತಂತೆ ಕೇಳಿಲ್ಲವಾ ನೀವು. ನಾವು ಪುಂಗಿ ಊದುತ್ತಾ ಅದರಲ್ಲೇ ಕರೀತೀವಿ. ಇಲ್ಲಿ ಮಕ್ಕಳಿದಾವೆ, ಮರಿ ಇದಾವೆ. ಜನ ಓಡಾಡ್ತಾರೆ. ಇಲ್ಲಿ ನಿನಗೆ ಯಾವತ್ತಿದ್ರೂ ತೊಂದ್ರೆ. ಇಲ್ಲಿರೋದು ಬೇಡ ಬಾ, ಬಾ. ನಿನಗೆ ಮೊಟ್ಟೆ ಕೊಡ್ತೀನಿ, ಹಾಲು

ಕೊಡ್ತೀನಿ, ಕೋಳಿಪಿಳ್ಳೆ ಕೊಡ್ತೀನಿ, ನೀನಿಲ್ಲಿರೋದು ಬ್ಯಾಡ, ಬಾ ಬಾ, ಅಂತ ನಂಬಿಸಿ ಕರೀತೀವಿ. ಬಂದಕೂಡಲೇ ಹಿಡಿದು ಹಲ್ಲು ಕಿತ್ತು ಬುಟ್ಟಿಗೆ ಹಾಕ್ತೀವಿ" ಎಂದು ರಾಗವಾಗಿ ಪುಂಗಿ ನಾದದ ಶೈಲಿಯಲ್ಲೇ ಹಾವು ಕರೆಯುವುದನ್ನು ಅಂದು ತೋರಿಸಿದ.

ನಾನು ಎತ್ತುವ ಆಕ್ಷೇಪಗಳಿಗೆ ಎಂಗ್ಟ ನಿರರ್ಗಳವಾಗಿ ಉತ್ತರಿಸುತ್ತಿರುವುದನ್ನು ನೋಡಿದರೆ ಇವೆಲ್ಲಾ ಅವನಿಗೆ ತೀರಾ ಮಾಮೂಲಿ ಪ್ರಶ್ನೆಗಳಿರಬೇಕು. ಅದಕ್ಕೇ ಸಿದ್ಧ ಉತ್ತರಗಳನ್ನು ನೀಡುತ್ತಿದ್ದ. ಅದು ಹೇಗೋ ನಮ್ಮ ಮಿತ್ರರು ಮೂಢನಂಬಿಕೆಗಳಿಗೂ ಎಂಗ್ಟನಿಗೂ ಸಂಬಂಧ ಕಲ್ಪಿಸಿದ್ದರಿಂದ ನಾನು ಅವನನ್ನು ಮೋಸಗಾರನೆಂದು ಸಾಬೀತು ಮಾಡಬೇಕಾದ ಅನಿವಾರ್ಯತೆಗೆ ಸಿಕ್ಕಿಕೊಂಡಿದ್ದೆ. ಅವನ ಉತ್ತರಗಳನ್ನು ಕೇಳಿದಂತೆಲ್ಲಾ ಇವನು ಎಂಥ ಘಾಟಿ ಎನ್ನಿಸುತ್ತಿತ್ತೇ ಹೊರತು ಇವನು ಪುಂಗಿ ಊದಿ ನಿಜಕ್ಕೂ ಹಾವುಗಳನ್ನು ಹಿಡಿಯುತ್ತಿರಬಹುದೆ ಎಂಬುದು ಹೊಳೆಯಲೇ ಇಲ್ಲ.

ಅವನು ಪುಂಗಿ ಊದುತ್ತಿರಬೇಕಾದರೆ ಮಾರನನ್ನೂ ಪ್ಯಾರನನ್ನೂ ಕರೆದು ಒಂದೊಂದು ಕಡೆ ಒಬ್ಬೊಬ್ಬರನ್ನು ಕಾವಲಿಗೆ ನಿಲ್ಲಿಸಿ ಇವನ ಪುಂಗಿ ಸಂಗೀತಕ್ಕೆ ನಿಜಕ್ಕೂ ಹಾವು ಬರುತ್ತವೆಯೋ, ಇಲ್ಲಾ ಏನಾದರೂ ಮೋಸ ನಡೆಯುತ್ತದೋ ಕಣ್ಣಿಟ್ಟು ನೋಡಿರಿ ಎಂದು ಹೇಳಿದೆ. ನಾನು ಇಷ್ಟೊಂದು ಜಾಗರೂಕತೆ ವಹಿಸಿರುವುದರಿಂದ ಹೋದ ಸಾರಿಯಷ್ಟು ಸುಲಭದಲ್ಲಿ ಈ ಸಾರಿ ಮೋಸ ಮಾಡಲು ಸಾಧ್ಯವಾಗುವುದಿಲ್ಲ, ಇವನ ಕಳ್ಳಾಟ ಬಯಲಾಗುತ್ತದೆ, ಇಲ್ಲವೇ ಇವನು ಹಾವು ಹಿಡಿಯದೆ ಹಿಂದಿರುಗಬೇಕಾಗುತ್ತದೆ ಎಂದು ಊಹಿಸಿದೆ.

ಎಂಗ್ಟ ಅತ್ತಿತ್ತ ಹಲವು ದಿಕ್ಕುಗಳಿಗೆ ಪುಂಗಿ ಊದುತ್ತಿದ್ದವನು ಕೊಂಚ ಹೊತ್ತಿನ ಅನಂತರ ಒಂದೇ ದಿಕ್ಕಿಗೆ ಊದತೊಡಗಿದ. "ಏನೋ! ಎಲ್ಲಿ ಒಂದು ಹಾವೂ ಬರಲಿಲ್ವಲ್ಲೋ?" ಎಂದು ಚುಡಾಯಿಸಿದೆ.

"ಇಲ್ಲೆಲ್ಲೋ ಒಂದು ಹಾವಿದೆ ಸ್ವಾಮಿ. ಪುಂಗಿ ಕಣ್ಣು ಕಟ್ತಿದೆ. ಆದ್ರೂ ನಾಗ್ರಾಜ ಯಾಕೋ ಹೊರಗೆ ಬರ್ತಿಲ್ಲ" ಎಂದ ಎಂಗ್ಟ.

"ಹೇಗೆ ಗೊತ್ತಾಯ್ತು ನಿನಗೆ?"

"ಊದುತ್ತ, ಹಾವಿದ್ದರೆ ಪುಂಗೀದು ಒಂದು ಕಣ್ಣು ಕಟ್ತದೆ ಸ್ವಾಮಿ. ಆಗ ನಮಗೆ ಗೊತ್ತಾಗ್ತದೆ" ಎಂದ.



ಪುಂಗಿ ಊದಲು ಬರದ ನನಗೆ ಅದರ ಒಂದು ಕಣ್ಣು ಕಟ್ಟುತ್ತದೆ ಎಂದರೆ ಏನೆಂದು ಗೊತ್ತಾಗಲಿಲ್ಲ. ಎಂಗ್ಟ ಮತ್ತೂ ಅದೇ ದಿಕ್ಕಿಗೆ ಪುಂಗಿ ಊದಿದ. ನಾವು ಮೂರು ಜನರೂ ಒಂದು ಎಲೆ ಹರಿದಾಡಿದರೂ ಗಮನವಿಟ್ಟು ಪರೀಕ್ಷಿಸುತ್ತ ಅವನ ಸುತ್ತ ಸರ್ಪ ಕಾವಲು ನಿಂತಿದ್ದೆವು. ಈ ಸಾರಿ ಇವನ ಮೋಸವೆಲ್ಲ ಬಟಾಬಯಲಾಗುತ್ತದೆ ಎಂದು ಖುಷಿಯಾಯ್ತು.

ಅಷ್ಟರಲ್ಲಿ ಎಂಗ್ಟ, "ಅಯ್ಯಯ್ಯೋ ಸ್ವಾಮಿ ಇತ್ಲಾಗೆ ಬನ್ನಿ! ನೋಡಿ ನಿಮ್ಮ ಕಾಲಡೀಲೆ ಹಾವು. ನಾಗರಹಾವು!" ಎಂದು ಕೂಗಿದ. ನಾನು ಬೆಚ್ಚಿಬಿದ್ದು ಎಂಗ್ಟನ ಕಡೆಗೆ ನೆಗೆದೆ. ಪ್ಯಾರ "ಅಯ್ಯಯ್ಯಮ್ಮಾ" ಎಂದು ಕೂಗಿಕೊಂಡು ದೂರ ಓಡಿದ. ನಾನು ನಿಂತಲ್ಲಿಂದ ಒಂದೇ ಒಂದು ಮಾರು ದೂರದಲ್ಲಿ ಆರು ಅಡಿ ಉದ್ದದ ಗೋಧಿನಾಗರ ಹಾವೊಂದು ನಾನು ನೆಗೆಯುತ್ತಲೂ ಗಾಬರಿಯಾಗಿ ಠಸ್ ಎನ್ನುತ್ತಾ ಹೆಡೆ ಬಿಚ್ಚಿತು.

"ಶಿವಶಿವಾ ಎಂಥಾ ಕೆಲಸ ಆಗೋಗ್ತಿತ್ತು ಬುದ್ಧೀ, ಎಲ್ಲಾದ್ರೂ ನಿಮ್ಮನ್ನ ಕುಟುಕಿದ್ರೆ ಏನು ಕತೆ. ಕಣ್ಕಟ್ಟು ಅಂದ್ರಲ್ಲ ಅದನ್ನು ಕೇಳಿಸಿಕೊಂಡು ಸುಳ್ಳೋ ನಿಜಾನೋ ತೋರುಸ್ತೀನಿ ಅಂತ ಕಾಲು ಬಡ್ಡೆಗೆ ಬಂದ್ಬಿಟ್ಟಿದೆ! ಇರ್ಲಿ ಬಿಡಿ ನಾನಿರಬೇಕಾದರೆ ಹೆದ್ರಿಕೆ ಇಲ್ಲ" ಎಂದು ನಮ್ಮ ಗಾಬರಿಯನ್ನು ನೋಡಿ ವ್ಯಂಗ್ಯವಾಡುವವನಂತೆ ನಾಟಕೀಯವಾಗಿ ಮಾತಾಡಿದ. ನನಗೆ ಅರ್ಥವೇ ಆಗಲಿಲ್ಲ. ನಾವು ಮೂರು ಜನರೂ ಹಾಗೆ ಕಣ್ಣಲ್ಲಿ ಕಣ್ಣಿಟ್ಟು ನೋಡುತ್ತಿರಬೇಕಾದರೆ ಹೇಗೆ ನನ್ನ ಕಾಲಿನ ಪಕ್ಕ ಇದ್ದ ತರಗೆಲೆಗಳಡಿಯಲ್ಲಿ ಇದು ಅವತರಿಸಿತು ಎಂದು.

"ಜೋಪಾನವಾಗಿ ನೋಡಿರೊ ಅಂತ ನಿಲ್ಲಿಸಿದ್ದರೆ ಇದೇನೇನ್ರೋ ನೀವು ನೋಡಿದ್ದು" ಎಂದು ಮಾರನಿಗೂ ಪ್ಯಾರನಿಗೂ ಬಯ್ದೆ.

"ನಾವು ಹಾವು ಬರಬಹುದು ಅಂತ ಕಾಡು ಕಡೀಗೆ ನೋಡ್ತಿದ್ವಿ. ನಿಮ್ಮ ಕಾಲ ಕಡೀಗೆ ಯಾಕೆ ನೋಡಾಕ್ ಹೋಗೋಣ" ಎಂದು ಮಾರ ಹೇಳಿದ.

ನಾಗರಹಾವು ಭಯಂಕರ ರೋಷದಲ್ಲಿದ್ದಂತೆ ಕಂಡಿತು. ಅತ್ತಿತ್ತ ಕತ್ತು ತಿರುಗಿಸುತ್ತ ಸುರುಸುರು ಬತ್ತಿಯ ಹಾಗೆ ಭುಸ್ಸೆನ್ನುತ್ತಾ ಹತ್ತಿರ ಬಂದವರಿಗೆ ಹೆಡೆ ಎತ್ತಿ ಅಪ್ಪಳಿಸಲು ಸಮಯ ಕಾಯುತ್ತಿತ್ತು.

ಮಾರ ಅದರ ಸಿಟ್ಟು ನೋಡಿ, "ಏನು ಬುಸುಗುಡುತ್ತದೆ! ಅದರ ಉಸುರು ಸುತ ಮನುಷ್ಯರಿಗೆ ತಾಗಬಾರದಂತೆ. ಅದನ್ನ ಮೊದಲು ಹಿಡಿದು ಬುಟ್ಟಿಗೆ ಹಾಕಿಕೋ ಮಾರಾಯ" ಎಂದು ಎಂಗ್ಟನತ್ತ ಮನವಿ ಮಾಡಿಕೊಂಡ.

"ಅಜ್ಜಾ ಒಂದು ಕೆಲಸ ಮಾಡ್ತೀಯಾ! ಸ್ವಾಮೇರು ನಾಗರಹಾವು ಹಿಡಿದರೆ ಒಂದ್ರೂಪಾಯ ಕೊಡ್ತಾರಂತೆ. ನಾನು ಒಂದು ರೂಪಾಯಿ ಸೇರಿಸಿ ಎರಡು ರೂಪಾಯಿ ನಿಂಗೇ ಕೊಡ್ತೀನಿ. ಹಿಡಿದುಬಿಡು, ಹೆದರ್ಕೋಬೇಡ ನಾನಿದ್ದೀನಿ" ಎಂದು ಎಂಗ್ಟ ಮಾರನಿಗೆ ಹೇಳಿದ.

"ಅಯ್ಯಯ್ಯೋ ಮಾರಾಯ. ನಿನ್ನ ದಮ್ಮಯ್ಯ. ಸದ್ಯ ಅದನ್ನ ಒಂದು ಸಾರಿ ಹಿಡಿದು ಬುಟ್ಟಿಗೆ ಹಾಕು. ನಾನು ಇನ್ನೊಂದು ನಾಕು ದಿನ ಬದ್ಕಿರೋಣ ಅಂತ ಮಾಡಿದ್ದೀನಿ" ಎಂದು ಮಾರ ಮರಣದಂಡನೆಗೆ ಸಿಕ್ಕಿಕೊಂಡವನಂತೆ ಹೆದರಿ ಎಂಗ್ಟನತ್ತ ಗೋಗರೆದ.

ನಾಗರಹಾವು ಎತ್ತಿದ ಹೆಡೆ ಇಳಿಸದೆ ಅತ್ತಿತ್ತ ನೋಡುತ್ತಾ ಠಸ್ ಎನ್ನುತ್ತಿತ್ತು.

"ಏನ್ ಸ್ವಾಮಿ. ಇದು ಸಾಧಾರಣದ ಹಾವಲ್ಲ. ಅಸ್ಲಿ ನಾಗರಹಾವು. ಹೆಡೆ ಹತ್ರ ಗೀರು ನೋಡಿ. ಒಂದೇ ಒಂದು ಗಳಿಗೆ ಇದೆ. ಅದಕ್ಕೇ ಇದನ್ನ ಕರೆಯೋದಕ್ಕೆ ನನ್ನ ಎದೆ ಒಳಗಿನ ಉಸುರೆಲ್ಲಾ ಬಿದ್ದೋಯ್ತು. ಒಂದ್ ಗಂಟೆ ಪುಂಗಿ ಊದಿ ಕಷ್ಟಾ ಬಿದ್ದಿದೀನಿ ಸೋಮೇ. ಹಿಡಿದ ಮೇಲೆ ನೀವು ಚೌಕಾಸಿ ಮಾಡಬಾರ್ದು. ಐದು ರೂಪಾಯಿ ಇನಾಮು ಕೊಡಬೇಕು" ಎಂದ ಎಂಗ್ಟ ನನ್ನ ಕಡೆಗೆ ತಿರುಗಿ.

ಅವನು ಈಗ ಬ್ಲಾಕ್‌ಮೇಲ್ ಮಾಡುವವನಂತೆ ಮಾತಾಡಿದ್ದನ್ನು ನೋಡಿ ನನಗೆ ರೇಗಿತು. "ಅದೆಲ್ಲಾ ಇಲ್ಲ. ಒಂದು ರೂಪಾಯಿ ಅಂತ ಹೇಳಿದ ಮೇಲೆ ಒಂದು ರೂಪಾಯಿ" ಎಂದೆ.

"ಹಂಗಾರೆ ಒಂದು ಕೆಲಸ ಮಾಡಿ. ನನ್ನ ಸೊಂಟದಾಗೆ ನಾಗರಮಣಿ ಇದೆ. ಅದಿದ್ರೆ ಹಾವು ಸುಮ್ನಾಗ್ತದೆ. ನೀವೇ ಹಿಡಿದುಬಿಡಿ. ನನಗೆ ಒಂದು ಪೈಸೆ ಕೊಡಬ್ಯಾಡ್ರಿ. ಏನಾದ್ರೂ ಹೆಚ್ಚು ಕಡಿಮೆ ಆದರೆ ನಾನಿದ್ದೀನಿ" ಎಂದ ಎಂಗ್ಟ. ಅವನ ಮೇಲೆ ಅನುಮಾನ ಮೂಡಿ ರೇಗಾಡಿದ್ದಕ್ಕೆ ಮುಯ್ಯಿ ತೀರಿಸಲು ಈ ರೀತಿ ಚುಡಾಯಿಸುತ್ತಿದ್ದಾನೆಂದು ನನಗೆ ಸ್ಪಷ್ಟವಾಗಿ ಗೊತ್ತಾಯ್ತು.

"ಕಾಡಿನಲ್ಲಿದ್ದ ಹಾವನ್ನ ಪುಂಗಿ ಊದಿ ಮನೆ ಹತ್ರ ಕರೆದು ಈಗ ಐದು ರೂಪಾಯಿ ಕೊಟ್ರೆ ಹಿಡಿತೀನಿ ಅಂತ ಚೌಕಾಸಿ ಮಾಡ್ತೀಯಾ? ಹಾವು ಹಿಡೀತೀನಿ ಅಂತ ಬಂದೋನು ನೀನೋ ನಾನೋ? ಒಳ್ಳೆ ಮಾತ್ನಲ್ಲಿ ಹಿಡಿ" ಎಂದೆ.

"ಏನು ಸ್ವಾಮಿ, ಅದನ್ನ ಹಿಡಿಯೋದಕ್ಕೆ ಹೋದರೆ ನನ್ನ ಜೀವಕ್ಕೇ ಅಪಾಯ. ಬಿಟ್ಟರೆ ನಿಮ್ಮ ಜೀವಕ್ಕೆ ಅಪಾಯ. ಮನುಷ್ಯರ ಜೀವಕ್ಕೆ ಐದು ರೂಪಾಯಿ ಬೆಲೆ



ಇಲ್ಲವ? ನಿಮ್ಮ ಪ್ಯಾಂಟು ಕೊಡಕಿದರೆ ಅಂತವು ಐದು ರೂಪಾಯಿ ನೂರು ಬೀಳೊಲ್ಲವ?" ಎಂದೆನ್ನುತ್ತ ಸ್ವಲ್ಪ 'ಎ' ಸರ್ಟಿಫಿಕೇಟ್ ಮಾತಾಡಿದ.

ಹಾವು ಹೆಡೆ ಎತ್ತಿಕೊಂಡೇ ಮೆಲ್ಲ ಮೆಲ್ಲಗೆ ಹಿಂದೆ ಸರಿಯಲಾರಂಭಿಸಿತು. ಅಲ್ಲಿಂದ ಕೊಂಚವೇ ದೂರದಲ್ಲಿ ನಮ್ಮ ಸೌದೆ ಕೊಟ್ಟಿಗೆಯ ಸೌದೆ ರಾಶಿ ಇತ್ತು. ಈ ಹಾವು ಅದರೊಳಗೇನಾದರೂ ನುಗ್ಗಿದರೆ ಮಾರನೂ, ಪ್ಯಾರನೂ ಇನ್ನೆಂದೂ ಸೌದೆ ತರಲು ಅದರ ಹತ್ತಿರ ಸುಳಿಯುವುದಿಲ್ಲ. ಎಂಗ್ಟನೋ ಹಾವಿನ ಹೆಡೆಯ ನೆರಳಿನಲ್ಲಿ ಕುಳಿತು ಚೌಕಾಸಿ ಮಾಡುತ್ತಾ ಇದ್ದಾನೆ. ನಾನು ಇವನನ್ನು ಪರೀಕ್ಷೆ ಮಾಡಲು ಹೋಗಿದ್ದೇ ತಪ್ಪಾಯ್ತೆಂದು ಯೋಚಿಸಿದೆ. ಸತ್ಯಾನ್ವೇಷಣೆ ಕೊಂಚ ದುಬಾರಿಯಾಗುತ್ತಿರುವಂತೆ ಅನ್ನಿಸಿತು.

"ನೋಡಿ ಸೋಮೇ, ಹಾವು ಹಿಂದಕ್ಕೆ ಹೋಗ್ತಾ ಇದೆ. ಕರೆದ ಹಾವು ಹೆದರಿ ಹಿಂದಕ್ಕೆ ಹೋದ ಮೇಲೆ ನೀವು ನೂರು ರೂಪಾಯಿ ಕೊಟ್ರೂ ಬರೋದಿಲ್ಲ. ನಾನು ಸಂಜೆ ತನಕ ಪುಂಗಿ ಊದಿದ್ರೂ ಬರೋದಿಲ್ಲ. ಐದ್ರೂಪಾಯಿ ಮೊಕ ನೋಡಬ್ಯಾಡ್ರಿ" ಎಂದ. ಅವನ ಮಾತು ಕೊನೆ ಎಚ್ಚರಿಕೆಯಂತೆ ನನಗೆ ಕೇಳಿತು.

"ಏನು ಬರೀ ದುಡ್ಡಿಗೇ ಬದ್ಕಿರೋನ ಹಂಗೆ ಆಡ್ತೀಯಲ್ಲ. ಆಯ್ತು, ಕೊಡೋಣ ಹಿಡಿ" ಎಂದೆ ಎಂಗ್ಟ ಕೋಲಿನಲ್ಲಿ ಅದರ ಕುತ್ತಿಗೆ ಒತ್ತಿ ಅದರ ತಲೆಯನ್ನೇ ಹಿಡಿದ. ಆ ಹಾವನ್ನು ಹಿಡಿಯ ಹೋದಾಗ ಅದು ಹೆಡೆ ಬೀಸಾಡಿದ್ದು, ಭುಸುಗುಟ್ಟಿದ್ದು ನೋಡಿ ನನಗೆ ಗಾಬರಿಯಾಯ್ತು. ಬುಟ್ಟಿಯಲ್ಲಿದ್ದ ಹಲ್ಲು ಕಿತ್ತ ಹಾವುಗಳಿಗೂ, ಈ ಹಾವಿಗೂ ನಡವಳಿಕೆಯಲ್ಲಿ ಅಜಗಜಾಂತರ ವ್ಯತ್ಯಾಸ ಇತ್ತು.

ಹಾವು ಹಿಡಿದ ಮೇಲೆ ಅದರ ಮೈಯಲ್ಲಿ ಕಚ್ಚಿ ಹಿಡಿದಿದ್ದ ಕಾಡಿನ ಉಣ್ಣೆಗಳನ್ನು ತೋರಿಸುತ್ತ ಎಂಗ್ಟ, "ನೋಡಿ ಸೊಮೇ, ಕಣ್ಕಟ್ಟು, ಸಾಕಿದ ಹಾವು, ಹಂಗೆ ಹಿಂಗೆ ಅಂತ ಹೇಳಿದೋರ ಮಾತು ಕೇಳಿ ಕೂಗಾಡ್ತೀರಲ್ಲ, ಇದ್ರ ಮೈಮೇಲೆ ಕಾಡಿನ ಉಣ್ಣೆ ಕಚ್ಚಿಕೊಂಡಿರೋದು ಕಾಣೊಲ್ವ?" ಎಂದು ಸೊಂಟದಲ್ಲಿದ್ದ ಚಾಕು ತೆಗೆದು ಅದರ ಬಾಯೊಳಗೆ ಮಾಂಸದಲ್ಲಿ ಹುದುಗಿದ್ದ ವಿಷದ ಹಲ್ಲುಗಳನ್ನು ಮೀಟಿ ತೋರಿಸಿ ಕಿತ್ತೆಸೆದ.

ಅವತ್ತೇ ಮನೆಯಿಂದ ಕೊಂಚ ದೂರದಲ್ಲಿ ದೊಡ್ಡ ಕೊಳಕುಮಂಡಲ ಹಾವನ್ನೂ ಹಿಡಿದ. ಕೊಳಕು ಮಂಡಲ ಹಾವುಗಳು ಬಲು ನಿಧಾನ ಪ್ರಾಣಿಗಳು. ಮಿಕ್ಕ ಪ್ರಾಣಿಗಳಂತೆ ಹೆಜ್ಜೆ ಸದ್ದಿಗೆ ಓಡಿ ಹೋಗುವುದೂ ಇಲ್ಲ. ಅದನ್ನು ತುಳಿಯುವವರೆಗೂ ಮಲಗೇ ಇರುತ್ತವೆ. ಅವು ಕಚ್ಚಿದರೆ ಕಾಲು ಶೀಘ್ರವಾಗಿ ಕೊಳೆಯುತ್ತದೆ.

ಎಂಗ್ಟ ಕೊಳಕುಮಂಡಲವನ್ನು ಹಿಡಿದು ಹಲ್ಲುಗಳನ್ನು ಕೀಳುತ್ತಿರಬೇಕಾದರೆ ಅದು ಪಟಪಟ ಬಾಲ ಬಡಿಯುತ್ತ ಒದ್ದಾಡಿತು. ಆಗ ಅದರ ಹೊಟ್ಟೆಯೊಳಗಿಂದ ಪುಟ್ಟ ಪುಟ್ಟ ಮಂಡಲದ ಹಾವಿನ ಮರಿಗಳು ಉದುರಿದವು. ಹಾವುಗಳೆಲ್ಲಾ ಮೊಟ್ಟೆ ಇಡುತ್ತವೆಂದೂ ತಿಳಿದಿದ್ದ ನನಗೆ ಆಶ್ಚರ್ಯ ಆಯ್ತು. ಎಂಗ್ಟ ಮಂಡಲದ ಹಾವು ಮರಿ ಹಾಕುತ್ತವೆಂದೂ, ಅದು ಮರಿ ಹಾಕಿದಾಗ ಮರಿಗಳು ಒಂದು ಬಗೆಯ ಸದ್ದು ಮಾಡುತ್ತವೆಂದೂ, ಆಗ ಕೆಂಬೂತ ಬಂದು ಎರಡು ಮರಿಗಳನ್ನು ಉಳಿಸಿ ಮಿಕ್ಕವೆಲ್ಲವನ್ನೂ ತಿನ್ನುತ್ತದೆಂದೂ ಹೇಳಿದ.

ಕೆಂಬೂತ ಹಾವಿನ ಮರಿಗಳನ್ನು ಹಿಡಿದು ತಿನ್ನುವುದನ್ನು ನೋಡಿದ್ದೆ. ಆದರೆ ತಿನ್ನುತ್ತಾ ಎರಡು ಮರಿಗಳನ್ನು ಉಳಿಸುವುದು ಇತ್ಯಾದಿಗಳು ಎಂಗ್ಟನ ಕಲ್ಪನೆ ಇರಬಹುದು. ಮಾರ ಮಂಡಲದ ಹಾವಿನ ಹೊಟ್ಟೆಯೊಳಗಿಂದ ಬಿದ್ದ ಮರಿಗಳನ್ನು ನೋಡಿ. "ಅಯ್ಯಯ್ಯೋ! ಇಷ್ಟೂ ಮರಿಗಳು ಬದುಕಿದರೆ ಒಂದು ಊರು ಹಾಳು ಮಾಡಲು ಸಾಕು. ಥು ಇದರ ಸಂತಾನ ಹಾಳಾಗ" ಎಂದು ಬಯ್ಯುತ್ತ ಕೋಲು ತಗೊಂಡು ಪ್ಯಾರನ ಜೊತೆ ಅವೆಲ್ಲವನ್ನೂ ಚಚ್ಚಿ ಸಾಯಿಸಿದ.

ಎಂಗ್ಟನಿಗೆ "ನೀನು ಹಿಡಿದ ಹಾವನ್ನು ಏನು ಮಾಡುತ್ತೀಯಾ?" ಎಂದು ಕೇಳಿದೆ. ಏಕೆಂದ್ರೆ ಹಾವು ಹಿಡಿಯುವುದೇ ಅವನ ಹೊಟ್ಟೆಪಾಡಾದುದರಿಂದ ಹಿಡಿದುದನ್ನೆಲ್ಲಾ ಅವನು ಅಲ್ಲೇ ಎಲ್ಲಾದರೂ ಬಿಟ್ಟುಬಿಡುತ್ತಾನೋ ಎಂದು ನನಗೆ ಅನುಮಾನವಾಯ್ತು. ಅವನು ಅವುಗಳನ್ನು ಕೆಲವು ದಿನ ಇಟ್ಟುಕೊಂಡು ಅವುಗಳ ಬಾಯಿಂದ ವಿಷ ತೆಗೆದು ಸಂಗ್ರಹಿಸುತ್ತಾನಂತೆ. ಹಾಗೆ ತೆಗೆದ ವಿಷವನ್ನು ಕೊಯಮತ್ತೂರಿನ ಹತ್ತಿರದ ಯಾವುದೋ ಸನ್ಯಾಸಿಗೆ ಮಾರುತ್ತೇನೆಂದು ಹೇಳಿದ ಆಮೇಲೆ ಅವುಗಳನ್ನು ಸಾಯಿಸಿ ಚರ್ಮ ತೆಗೆದುಕೊಂಡು ಮಿಕ್ಕಿದ್ದನ್ನು ದಾಸರಹಾವಿಗೆ ಆಹಾರವಾಗಿ ಕೊಡುತ್ತಾನಂತೆ.

ಎಂಗ್ಟ ಐದು ರೂಪಾಯಿ ಇನಾಮು ಸಮೇತ ಹಣ ವಸೂಲಿ ಮಾಡಿಕೊಂಡು ಹೋದ. ಅವನಿಗೆ ದುಡ್ಡು ಸಿಕ್ಕಿದ್ದನ್ನು ನೋಡಿದ ಮಾರನಿಗೆ ಹೊಟ್ಟೆಕಿಚ್ಚು ತಡೆಯಲಾಗಲಿಲ್ಲ. ಅವನು ಹೋಗುವವರೆಗೂ ಚಕಾರ ಎತ್ತದೆ ತೆಪ್ಪಗಿದ್ದವನು ಅವನು ಹೋದಮೇಲೆ, "ಆ ಸೂಳೆಮಗ ಮಾಡೋದೆಲ್ಲಾ ಬರೀ ಕಣ್ಕಟ್ಟು. ನಿಮ್ಮಂತೋರ ಹತ್ರ ದುಡ್ಡು ಕೀಳೋದಕ್ಕೆ ಇದೆಲ್ಲಾ" ಎಂದ.

"ಮತ್ತೆ ದುಡ್ಡು ನಿನಗೇ ಕೊಡ್ತೀನಿ, ಹಾವು ಹಿಡಿ ಅಂತ ನಿನಗೆ ಹೇಳಿದ! ನೀಯಾಕೆ ಹಿಡಿಯಲಿಲ್ಲ?" ಎಂದೆ.



"ಥೂ, ಸಾವಿರ ರೂಪಾಯಿ ಕೊಡ್ತೀನಂದ್ರೂ ನಾ ಮಾತ್ರ ಹಾವು ಮುಟ್ಟೋಲ್ಲ" ಎಂದು ಹೇಳಿದ. ಅವನ ಅಸಹನೆ ಏತಕ್ಕೆಂದು ಅವನಿಗೇ ಗೊತ್ತಿರಲಿಲ್ಲ.

ಇಷ್ಟೆಲ್ಲಾ ಪರೀಕ್ಷೆಮಾಡಿ ಅವನು ಹಿಡಿದವು ಕಾಡಿನ ಹೊಸ ಹಾವುಗಳೇ ಎಂದು ದೃಢಪಡಿಸಿಕೊಂಡ ಮೇಲೂ ಏನೋ ರಹಸ್ಯಮಯವಾದುದು ಎಂಗ್ಟನಲ್ಲಿ ನನಗೆ ಕಾಣುತ್ತದೆ. ನಾವು ಮೂರು ಜನರೂ ಕಣ್ಣಲ್ಲಿ ಕಣ್ಣಿಟ್ಟು ನೋಡುತ್ತಿದ್ದರೂ ಆ ಗೋಧಿನಾಗರಹಾವು ನಮ್ಮ ಕಣ್ಣಿಗೇಕೆ ಕಾಣಿಸಲಿಲ್ಲ? ಅದೂ ನನ್ನ ಕಾಲ ಬಳಿಯೆ ನಮಗೊಂದು ಸೂಚನೆಯನ್ನೂ ಕೊಡದೆ ಬಂದಿದ್ದು ಹೇಗೆ? ಅವನು ಹಾವು ಕಂಡಾಗ ವರ್ತಿಸಿದ್ದೆಲ್ಲ ಪೂರ್ವೋದ್ದೇಶಿತ ನಾಟಕದಂತೆ ಇತ್ತಲ್ಲ? ಇದೆಲ್ಲಾ ಕೇವಲ ಆಕಸ್ಮಿಕ ಮತ್ತು ಕಾಕತಾಳೀಯವೇ?

ಎಂಗ್ಟ ಹೋದಮೇಲೆ ಅವನು ಹಾವು ಹಿಡಿಯುವುದರ ಫೋಟೋ ತೆಗೆಯಬೇಕೆಂದೂ ನಾವು ತೀರ್ಮಾನಿಸಿದ್ದು ನೆನಪಿಗೆ ಬಂತು. ಎಂಗ್ಟನ ಜೊತೆಯ ವಾಗ್ವಾದದ ಗಡಿಬಿಡಿಯಲ್ಲಿ ಇದನ್ನು ಮರೆತೇಬಿಟ್ಟಿದ್ದೆ.

೪

ಮೂರು ತಿಂಗಳ ತರುವಾಯ ಇನ್ನೇನು ಮಳೆ ಹಿಡಿಯುತ್ತದೆ ಎನ್ನುವ ಸಮಯದಲ್ಲಿ ದಾರಿಯಲ್ಲಿ ಎಂಗ್ಟ ನನಗೆ ಕಾಣಸಿಕ್ಕ. ಅವನಿಗೆ ಹಾವು ಹಿಡಿಯುವುದರ ಫೋಟೋ ತೆಗೆಯಬೇಕೆಂದೂ ಇನ್ನೊಮ್ಮೆ ಬರಲು ಹೇಳಿದ್ದೆ. ಫೋಟೋ ತೆಗೆಯುವುದರ ಉದ್ದೇಶ ಅವನಿಗೆ ಗೊತ್ತಿರಲಿಲ್ಲ. ಹಾಗೇ ಹೇಳಿದ ಕೂಡಲೇ ಅವನು ಚಿಂತೆ ವ್ಯಕ್ತಪಡಿಸುತ್ತ "ಅದೊಂದು ಮಾತ್ರ ಬ್ಯಾಡಿ ಸ್ವಾಮಿ" ಎಂದ.

ಹಾಗಾದರೆ ಏನೋ ಇರಬೇಕು! ಎಲ್ಲಾ ಪರೀಕ್ಷೆಗಳಿಗೂ ಸಂತೋಷದಿಂದ ಸಮ್ಮತಿಸುತ್ತಿದ್ದ ಇವನೇಕೆ ಇದಕ್ಕೆ ಒಲ್ಲೆ ಎನ್ನುತ್ತಿದ್ದಾನೆ. ಸಿಕ್ಕಿ ಬಿದ್ದಾ ಕಳ್ಳ! ಎಂದು ಯೋಚಿಸಿದೆ.

"ಲೋ ಎಂಗ್ಟ, ನಿಂದೇನೋ ಮೋಸ ಇರಬೇಕು. ಇಲ್ದಿದ್ರೆ ಅದ್ಯಾಕೆ ಫೋಟೋ ಬ್ಯಾಡಾಂತೀಯಾ?" ಎಂದು ಕೇಳಿದೆ.

"ಮೋಸ ಇಲ್ಲ ಏನೂ ಇಲ್ಲ ಸ್ವಾಮಿ. ಫೋಟೊ ತೆಗೆಸಿಕೊಳ್ಳೋದಕ್ಕೆ ಹೋಗಿ ಸತ್ತೋಗ್ತಿದ್ದೆ ಅದ್ಕೆ ಬ್ಯಾಡಾಂದೆ" ಎಂದ. ನನಗೆ ಇನ್ನಷ್ಟು ಆಶ್ಚರ್ಯ ಆಯ್ತು. "ಏನು ವಿಷಯ?" ಎಂದು ಕೇಳಿದಾಗ "ಅದೊಂದು ದೊಡ್ಡ ಕತೆ" ಎಂದು ದಾರಿಯಲ್ಲೇ ಒಂದು ಗಂಟೆ ಸವಿಸ್ತಾರವಾಗಿ ಹೇಳಿದ.

ಎಂಗ್ಟ ಹಗರೆ ಸಂತೆಯಲ್ಲಿ ಯಥಾಪ್ರಕಾರ ದಾಸರ ಹಾವನ್ನು ಪಕ್ಕ ಇಟ್ಟುಕೊಂಡು ನಾರು ಬೇರುಗಳನ್ನೆಲ್ಲಾ ಮಾರುತ್ತಿದ್ದ. ಎಲ್ಲ ಸಾಧಾರಣ ದಿನಗಳಂತೆ ಆ ದಿನವೂ ಎಂಗ್ಟನ ದಿನಚರಿ ನಡೆದಿತ್ತು. ಯಾರೋ ಬೇಲೂರಿಗೆ ಹೊರಟಿದ್ದ ಪ್ರವಾಸಿಗರು ಅದೇ ಹಾದಿಯಾಗಿ ಬಂದರು. ಎಂಗ್ಟ ಬಿಚ್ಚಿ ಹರಡಿಕೊಂಡಿದ್ದ ಹಾವಿನ ಚರ್ಮಗಳನ್ನು ನೋಡಿ ಅವುಗಳನ್ನು ಕೊಳ್ಳಲೋ ಅಥವಾ ಕೇವಲ ನೋಡಲೋ ಅವನ ಬಳಿಗೆ ಬಂದರು. ಅವರಲ್ಲೊಬ್ಬನ ಕುತ್ತಿಗೆಯಲ್ಲಿ ಕ್ಯಾಮರಾ ನೇತಾಡುತ್ತಿತ್ತು. ಆತ ಎಂಗ್ಟ ಹಾವಾಡಿಸುವ ಪೋಟೋ ತೆಗೆಯಬೇಕೆಂದೂ, ದುಡ್ಡು ಕೊಡುವುದಾಗಿಯೂ ಹೇಳಿದ. ಎಂಗ್ಟ ಬುಟ್ಟಿ ಮುಚ್ಚಳ ತೆಗೆದು ಅದರೊಳಗೆ ಸಿಂಬಿ ಸುತ್ತಿಕೊಂಡು ಮಲಗಿದ್ದ ನಾಗರ ಹಾವಿಗೆ ಚುಚ್ಚಿ ಮೀಟಿ ಹೆಡೆ ಎತ್ತುವಂತೆ ಮಾಡಿ ಅದರೆದುರು ಪುಂಗಿ ಊದಿದ, ಪೋಟೋಗ್ರಾಫರ್ ಹಲವಾರು ಫೋಟೋಗಳನ್ನು ತೆಗೆದ ಮೇಲೆ ಸುರುಳಿ ಸುತ್ತಿ ಮಲಗಿದ್ದ ದಾಸರ ಹಾವನ್ನು ಕೊಂಚ ಆಡಿಸಲು ಹೇಳಿದ. ಎಂಗ್ಟ ಅದು ಪೊದ್ದು ಹಾವೆಂದೂ, ಅದು ಪುಂಗಿ ನಾದಕ್ಕೆ ತಲೆಯಾಡಿಸುವುದಿಲ್ಲವೆಂದೂ ಹೇಳಿದ.

ಫೋಟೋಗ್ರಾಫರನಿಗೆ ಹೇಗಾದರೂ ಅದರೊಡನೆ ಎಂಗ್ಟನ ಫೋಟೋ ತೆಗೆಯಬೇಕಿತ್ತು. ಅದಕ್ಕಾಗಿ ಎಂಗ್ಟನಿಗೆ ಅದನ್ನು ಟವಲಿನ ರೀತಿಯಲ್ಲಿ ಹೆಗಲ ಮೇಲೆ ಹಾಕಿಕೊಂಡು ನಿಲ್ಲು, ಫೋಟೋ ತೆಗೆಯುತ್ತೇನೆಂದು ಹೇಳಿದ. ಎಂಗ್ಟ ಅದನ್ನು ಹೆಗಲ ಮೇಲೆ ಹಾಕಿಕೊಂಡು ನಿಂತ. ಫೋಟೋಗ್ರಾಫರ್ ಹತ್ತಿರ ನಿಂತು, ದೂರ ನಿಂತು, ಯಾವ ಕಡೆಯಿಂದ ತೆಗೆಯಬೇಕೆಂದು ಪರೀಕ್ಷಿಸುತ್ತಿರಬೇಕಾದರೆ ಹೆಗಲ ಮೇಲಿದ್ದ ಹಾವು ಅಲ್ಲಿಂದ ಹರಿಯುತ್ತ ಎಂಗ್ಟನ ಕಂಕುಳಿನ ಕಡೆಯಿಂದ ಬೆನ್ನ ಹಿಂದಿನ ನೆರಳತ್ತ ಹರಿಯಿತು. ಸೊಂಟದ ಕಡೆಗೆ ಸುತ್ತುವರಿಯಿತು, ಎಷ್ಟೋ ಸಾರಿ ಹೆಗಲ ಮೇಲೆ ಅದನ್ನು ಹಾಕಿಕೊಂಡಿದ್ದ ಎಂಗ್ಟ ಫೋಟೋಗ್ರಾಫರ್ ಸಿದ್ಧವಾದ ನಂತರ ಅದನ್ನು ಮತ್ತೆ ಸರಿಯಾಗಿ ಕೂರಿಸಿಕೊಳ್ಳೋಣವೆಂದು ಸುಮ್ಮನಿದ್ದ.

ಹಾವು ತಣ್ಣಗೆ ಮೆಲ್ಲಗೆ ಹರಿಯುತ್ತ ಹಾಗೇ ಸುತ್ತಿ ಎಂಗ್ಟನ ಮುಂಭಾಗಕ್ಕೆ ಬಂತು. ಎಂಗ್ಟನ ಮೈಸುತ್ತ ಒಂದು ಸುತ್ತು ಪೂರ್ತಿಯಾಯ್ತೊ ಇಲ್ಲವೋ ತಟಕ್ಕನೆ ಉಕ್ಕಿನ ಹಿಡಿತದಲ್ಲಿ ಅವನ ಬಲಗೈಯ್ಯನ್ನೂ ಸೇರಿಸಿ ಭಯಂಕರವಾಗಿ ಬಿಗಿದು ಬಿಟ್ಟಿತು! ಇದೆಲ್ಲ ಕ್ಷಣಾರ್ಧದಲ್ಲಿ ನಡೆದು ಹೋಗಿದೆ. ಅದರ ಬಿಗಿತಕ್ಕೆ ಒಂದೇ ಏಟಿಗೆ ಎಂಗ್ಟನ ಶ್ವಾಸಕೋಶದ ಉಸಿರೆಲ್ಲ ಹೊರಬಂದು, ಕೂಗಿಕೊಳ್ಳಲು ಮಾತಾಡಲು ಸಹ ಎಂಗ್ಟನ ಎದೆಯಲ್ಲಿ ಉಸಿರಿರಲಿಲ್ಲ. ಸುತ್ತ ನಿಂತಿದ್ದವರೆಲ್ಲ



ಎಂಗ್ಟನಿಗೆ ಮೂರ್ಛೆರೋಗ ಇರಬಹುದೆಂದು ಶಂಕಿಸಿದರೇ ಹೊರತು ಅವನ ಮೈಮೇಲೆ ಮುಗ್ಧವಾಗಿ ಹತ್ತಿ ಹರಿಯುತ್ತಿದ್ದ ಹಾವಿನ ಮೃತ್ಯು ಬಂಧದಲ್ಲಿ ಅವನು ಸಿಕ್ಕಿದ್ದಾನೆಂದು ಊಹಿಸಲು ಸಾಧ್ಯವಾಗಲಿಲ್ಲ. ಅವರಿಗೆ ಗೊತ್ತಾಗಿದ್ದರೂ ಅವರಿಂದ ಕಬಂಧನಂತೆ ಬಿಗಿದು ಹಿಡಿದಿದ್ದ ಆ ಹಾವಿನ ಅಪ್ಪುಗೆಯನ್ನು ಬಿಡಿಸಲು ಸಾಧ್ಯವಾಗುತ್ತಿತ್ತೋ ಹೇಳಬರುವುದಿಲ್ಲ.

ಎಂಗ್ಟ ಮೂರ್ಛೆರೋಗಿಗಳಂತೆಯೇ ದೊಪ್ಪನೆ ಬಿದ್ದು ಒದ್ದಾಡಿಕೊಳ್ಳತೊಡಗಿದ. ಅವನ ಬಾಯಲ್ಲಿ ನೊರೆ ಉಕ್ಕತೊಡಗಿತು. ಅವನ ಒದ್ದಾಟಕ್ಕೆ ಹಾವಿನ ಬುಟ್ಟಿಯ ಮುಚ್ಚಳ ಹಾರಿ ಹೋಗಿ ಅದರೊಳಗಿನ ಮೂರ್‍ನಾಲ್ಕು ನಾಗರಹಾವುಗಳು ಹೊರಬಿದ್ದವು. ಸುತ್ತ ನಿಂತಿದ್ದವರೆಲ್ಲ ಹೊರಬರುತ್ತಿದ್ದ ಹಾವುಗಳನ್ನು ನೋಡಿ ಜಾಗ ಖಾಲಿ ಮಾಡಿದರು. ಎಂಗ್ಟ ಏಕಾಂಗಿಯಾದ. ದಾಸರ ಹಾವು ಅವನ ಪ್ರಾಣವನ್ನೇ ಹಿಚ್ಚಿ ಹಿಂಡುತ್ತಿತ್ತು. ಎಂಗ್ಟನಿಗೆ ಕಣ್ಣು ಕತ್ತಲು ಬರುವುದಕ್ಕೆ ಮೊದಲು ಎಡಗೈಯಿಂದ ಸೊಂಟದಲ್ಲಿದ್ದ ಚಾಕುವನ್ನು ತೆಗೆದು ಅದರ ಹೊಟ್ಟೆ ಬಗೆದುದ್ದೊಂದೇ ಜ್ಞಾಪಕ. ಎಂಗ್ಟ ಹಾವಿನ ತಲೆಯನ್ನಾಗಲೀ, ಕುತ್ತಿಗೆಯನ್ನಾಗಲೀ ಹುಡುಕುವ, ಗುರುತಿಸುವ ಸ್ಥಿತಿಯಲ್ಲೇ ಇರಲಿಲ್ಲ. ಎಂಗ್ಟ ಚೂರಿ ಹಾಕಿದರೂ ದಾಸರ ಹಾವಿನ ಹಿಡಿತವೇನೂ ಕೂಡಲೇ ಸಡಿಲವಾಗಲಿಲ್ಲ. ಆದರೂ ಅದರ ಕರುಳೆಲ್ಲ ಹೊರ ಬರುವಂತೆ ಚೂರಿಯಲ್ಲಿ ಎಂಗ್ಟ ಬಗೆದಿದ್ದರಿಂದ ಹಾವಿನ ಹಿಡಿತ ನಿಧಾನವಾಗಿ ಸಡಿಲಾಯ್ತು.

ಎಂಗ್ಟನಿಗೆ ಮತ್ತೆ ಪ್ರಜ್ಞೆ ಮರಳಿದಾಗ ದಾಸರ ಹಾವು ತನ್ನ ದೇಹದೊಳಗೆ ಚುಚ್ಚಿಕೊಂಡಿದ್ದ ಚೂರಿ ಸಮೇತ ರಸ್ತೆ ಪಕ್ಕದ ತೋಟದ ಬೇಲಿಯೊಳಗೆ ನುಗ್ಗಲು ಹೋಗಿ ಚೂರಿ ಅಡ್ಡ ತಡೆದಿದ್ದರಿಂದ ಮುಂದುವರಿಯಲಾರದೆ ನಿಂತಿತ್ತು.

ನನಗೆ ಇದನ್ನೆಲ್ಲ ಎಂಗ್ಟ ಹೇಳುತ್ತಿದ್ದಂತೆಯೇ ಹಠಾತ್ತಾಗಿ ಅನೇಕ ದಿನಗಳ ಹಿಂದೆ ಸಂಭವಿಸಿದ ಎಂಗ್ಟನ ಹೆಂಡತಿಯ ನಿಗೂಢ ಸಾವು ಜ್ಞಾಪಕಕ್ಕೆ ಬಂತು. ಅವಳು ಗುಡಾರದೊಳಗೆ ಸತ್ತು ಮಲಗಿದ್ದು, ಗೂಟಕ್ಕೆ ಸುತ್ತಿಕೊಂಡು ಬಿದ್ದಿದ್ದ ದಾಸರ ಹಾವು, ಎಂಗ್ಟನ ಬಗ್ಗೆಯೇ ಸಂಶಯಪಡುತ್ತಿದ್ದ ಜನಗಳು ಇವೆಲ್ಲ ಚಿತ್ರಗಳು ಒಂದೊಂದಾಗಿ ಮನಃಪಟಲದ ಮೇಲೆ ಸುಳಿದವು.

ಅವಳ ಸಾವಿಗೂ ಈ ದಾಸರ ಹಾವೇ ಕಾರಣವಿರಬಹುದೆ ಎಂದು ಯೋಚಿಸಿದಂತೆಲ್ಲ ನನ್ನ ಸಂದೇಹ ಬಲವಾಗತೊಡಗಿತು.

* * *

**ಲೇಖಕರ ಪರಿಚಯ :**

ಕೆ.ಪಿ.ಪೂರ್ಣಚಂದ್ರ ತೇಜಸ್ವಿ ಅವರ ಪೂರ್ಣ ಹೆಸರು ಕುಪ್ಪಳ್ಳಿ ಪುಟ್ಟಪ್ಪ ಪೂರ್ಣಚಂದ್ರ ತೇಜಸ್ವಿ. ಇವರು ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿ ತಾಲೂಕಿನ ಕುಪ್ಪಳ್ಳಿಯಲ್ಲಿ ೮ನೇ ಆಗಸ್ಟ್ ೧೯೩೮ರಲ್ಲಿ ಜನಿಸಿದರು. ಇವರ ತಂದೆ ಕುವೆಂಪು ತಾಯಿ ಹೇಮಾವತಿ. ಇವರ ಪ್ರಾಥಮಿಕ ಶಿಕ್ಷಣ ಶಿವಮೊಗ್ಗದಲ್ಲಿ ಮುಗಿಸಿ, ಬಿ.ಎ. ಆನರ್ಸ್ ಮತ್ತು ಎಂ.ಎ. ಪದವಿಗಳನ್ನು ಮೈಸೂರಿನಲ್ಲಿ ಪೂರೈಸಿದರು. ಇವರ ಕಾವ್ಯನಾಮ ಪೂಚಂತೇ.

ತೇಜಸ್ವಿಯವರು ಛಾಯಾಗ್ರಹಣದಲ್ಲಿ ಮತ್ತು ಸಾಹಿತ್ಯದಲ್ಲಿ ವಿಶೇಷ ಒಲವನ್ನು ಇಟ್ಟುಕೊಂಡಿದ್ದರು. ಕನ್ನಡ ಸಾಹಿತ್ಯದಲ್ಲಿ ವಿಶಿಷ್ಟ ಬರವಣಿಗೆ ಮತ್ತು ಹೊಸ ಪ್ರಯೋಗ ಮೂಲಕ ಓದುಗರ ಮನಸ್ಸನ್ನು ಸೆಳೆದವರು. ಬೃಹನ್ನಳೆ, ಸೋಮುವಿನ ಸ್ವರ್ಗಲಹರಿ, ಹುಲಿಯೂರಿನ ಸರಹದ್ದು, ಅಬಚೂರಿನ ಪೋಸ್ಟಾಫೀಸು ಮುಂತಾದವು ಪ್ರಮುಖ ಕಥಾ ಸಂಕಲನಗಳು. ಯಮಳ ಪ್ರಶ್ನೆ ಅವರ ನಾಟಕ. ನಿಗೂಢ ಮನುಷ್ಯರು, ಚಿದಂಬರ ರಹಸ್ಯ, ಕಿರಗೂರಿನ ಗಯ್ಯಾಳಿಗಳು, ಕರ್ವಾಲೋ, ಜುಗಾರಿಕ್ರಾಸ್ ಇವು ಅವರ ಕಾದಂಬರಿಗಳು. ಕಾಡು ಮತ್ತು ಕ್ರೌರ್ಯ, ಫ್ಲೈಯಿಂಗ್ ಸಾಸರ್ ಭಾಗ-೧, ೨. ವಿಸ್ಮಯ ಭಾಗ-೧, ೨, ೩, ಕನ್ನಡ ನಾಡಿನ ಹಕ್ಕಿಗಳು, ಸಹಜ ಕೃಷಿ, ಈ ಅದ್ಭುತ ಜಗತ್ತು ಪರಿಸರ ಸಂಬಂಧಿತ ಕೃತಿಗಳು. ಅಲೆಮಾರಿ ಅಂಡಮಾನ್ ಮತ್ತು ಮಹಾನದಿ ನೈಲ್ ಪ್ರವಾಸ ಕಥನ ಮುಂತಾದವುಗಳು ಅವರ ಕೃತಿಗಳಾಗಿವೆ. ಇವರ ಕಥೆ ಮತ್ತು ಕಾದಂಬರಿಗಳನ್ನು ಆಧರಿಸಿ ಚಲನಚಿತ್ರಗಳು ತಯಾರಾಗಿವೆ. ಶ್ರೀಯುತರ ಸಾಹಿತ್ಯ ಸೇವೆಗೆ ೧೯೮೦ರಲ್ಲಿ ಕರ್ನಾಟಕ ಸಾಹಿತ್ಯ ಅಕಾದೆಮಿ ಬಹುಮಾನ, ಚಿದಂಬರ ರಹಸ್ಯ ಕೃತಿಗೆ ೧೯೮೭ರಲ್ಲಿ ಕೇಂದ್ರ ಸಾಹಿತ್ಯ ಅಕಾದೆಮಿ ಬಹುಮಾನಗಳು ಅವರಿಗೆ ಲಭಿಸಿವೆ. ಪ್ರಸ್ತುತ ಈ ಪಠ್ಯ ಭಾಗವನ್ನು ಪರಿಸರದ ಕಥೆ ಕೃತಿಯಿಂದ ಆಯ್ದುಕೊಳ್ಳಲಾಗಿದೆ.

**ಕಥೆಯ ಆಶಯ :**

ಎಂಗ್ಟನ ಪುಂಗಿ ಕಥೆಯು ಸಮಕಾಲೀನ ಸಂದರ್ಭದಲ್ಲಿ ಪರಂಪರಾಗತವಾಗಿ ನಂಬಿಕೊಂಡು ಬಂದಿದ್ದ ಹಾವಾಡಿಸುವ ಮತ್ತು ಹಾವು ಹಿಡಿಯುವ ವೃತ್ತಿಯು ಅವಸಾನದ ಅಂಚಿಗೆ ಬಂದು ನಿಲ್ಲುವ ಸ್ಥಿತಿಯನ್ನು ಬಿಂಬಿಸುತ್ತದೆ. ನಾಗರಿಕತೆ ಬೆಳೆದಂತೆಲ್ಲ ಹಾವುಗೊಲ್ಲ ಎಂಗ್ಟನ ಕೈಚಳಕ, ಎಷ್ಟೇ ಚಾಲಾಕಿತನ ಇದ್ದರೂ ಒಂದು ಹೊತ್ತಿನ ಊಟಕ್ಕೂ ಪರದಾಡಬೇಕಾಗುವುದು. ಆಧುನಿಕ ಜಗತ್ತಿನಲ್ಲಿ



ಅವನ ನಾಟಿ ಔಷಧಿಗಳು ಬೆಲೆ ಕಳೆದುಕೊಂಡಿದ್ದವು. ಕಾಡಿನ ಮೃಗ, ಪಕ್ಷಿ, ನದಿ, ಝರಿ ಎಲ್ಲವೂ ಅವಸಾನದ ಅಂಚಿಗೆ ಬಂದಿರುವಂತೆ ಎಂಗ್ಟನ ಅವಸಾನವೂ ಆಗುವುದೇ ಈ ಕಥೆಯ ವಸ್ತು. ಈ ಕತೆಯಲ್ಲಿ ನವಿರು ಹಾಸ್ಯ, ಮೊನಚಾದ ವೈಚಾರಿಕ ಚಿಂತನೆ ಗ್ರಾಮೀಣ ಸೊಗಡಿನ ಭಾಷೆ ಇವೆಲ್ಲವೂ ಓದುಗರನ್ನು ಸೆಳೆಯುವಲ್ಲಿ ಯಶಸ್ವಿಯಾಗಿವೆ.

■■

**ಘಟಕ–೩ : ಹಾಸ್ಯ ಪ್ರಜ್ಞೆ**

ಹಾಸ್ಯ ಪ್ರಜ್ಞೆ ಎಂದರೆ ನಗುವ ನಗಿಸುವ ಮನೋಭಾವ. ಹಾಸ್ಯ ಪ್ರಜ್ಞೆ ಬೆಳೆಸಿಕೊಳ್ಳಲು ಬೇರೆಯವರ ಹಾಸ್ಯವನ್ನು ಆನಂದಿಸುವ ಮನೋಭಾವ ನಮ್ಮಲ್ಲಿರಬೇಕು. ಆಗಲೇ ಬೇರೆಯವರನ್ನು ನಗಿಸಲು ಸಾಧ್ಯ. ಹಾಸ್ಯ ಅನೇಕ ರೀತಿಯಲ್ಲಿರುತ್ತದೆ. ಮಾತು/ಬರಹದ ಚಾತುರ್ಯದಿಂದ ಕೂಡಿರುತ್ತದೆ. ಅಭಿನಯದಿಂದ ಮತ್ತು ಲೋಕವನ್ನು ವಿಭಿನ್ನವಾಗಿ ನೋಡುವ ಸೂಕ್ಷ್ಮಪ್ರಜ್ಞೆಯೇ ಹಾಸ್ಯ ಪ್ರಜ್ಞೆ.

ಹಾಸ್ಯ ಎಲ್ಲರಿಗೂ ಬೇಕು. ಸ್ವಲ್ಪ ಹೊತ್ತು ಮೈಮರೆತು ಮುಖದಲ್ಲಿ ನಗೆ ತುಂಬಲು  ಅದು ಆರೋಗ್ಯವಂತಿಕೆಯ ಲಕ್ಷಣ. ಹೃದಯದ ನಿರ್ಮಲಭಾವ ಮುಖದಲ್ಲಿ ಪ್ರಫುಲ್ಲಗೊಳ್ಳುತ್ತದೆ. ಯಾವ ಭಿಡೆಯೂ ಇಲ್ಲದ ಹೂವು ಅರಳುವ ಹಾಗೆ. ಮನುಷ್ಯ ಯಾವ ಪರಿಸ್ಥಿತಿಯಲ್ಲಿದ್ದರೂ ಅವನ ಹೃದಯವನ್ನು ಹಗುರಗೊಳಿಸಬಲ್ಲ ಸಾಹಿತ್ಯದ ಯಾವುದೇ ತುಣುಕು ಹಾಸ್ಯವೆನಿಸುತ್ತದೆ. ಇದರಲ್ಲಿ ವ್ಯಕ್ತಿಯ ಸ್ಥಿತಭಾವವನ್ನು ಬದಿಗೆ ಸರಿಸಿ ನಗೆ ಬುಗ್ಗೆಯನ್ನು ಎಬ್ಬಿಸುವ ಸಾಮರ್ಥ್ಯವನ್ನು ಹಾಸ್ಯ ಮಾಡಬಲ್ಲದು.



# ೭. ಮೊಸರು ಅವಲಕ್ಕಿ



**ಸುನಂದಾ ಬೆಳಗಾಂವಕರ**

ಛಟ್ ಎಂದು ಸೀನಿದೆ. ಮೈಯನ್ನು ಹಿಂದಕ್ಕೂ ಮುಂದಕ್ಕೂ ದೂಡುತ್ತ ಹಣ್ಣು ಮೆಣಸಿನಕಾಯಿಯ ರಂಜಕ ಅರೆಯುತ್ತಿದ್ದ  ತಾಯಿ ಅಂದರು.

“ಇನ್ನೊಂದು ಸೀನು. ಒಂಟಿ ಸೀತಿಯಲ್ಲ” ಅವರ ಮಾತು ಮುಗಿಯುತ್ತಿದ್ದಂತೆ ಛಟ್ ಪಟ್ ಛಟ್ ಪಟ್ ಒಂದರ ಮೇಲೊಂದು ಸೀನಿದೆ.

“ನಿನ್ನೆ ಇಡೀ ಮಳಿಯೊಳಗೆ ತೋಯ್ಸಿಗೊಂಡು ಬಂದಿ. ನೆಗಡಿ ಆಗೇದ” ಎಂದು ತಮ್ಮಷ್ಟಕ್ಕೆ ತಾವೇ ನುಡಿದುಕೊಳ್ಳುತ್ತ, ರಂಜಕ ಅರೆಯುವುದನ್ನು ನಿಲ್ಲಿಸಿ, ಕೈ ತೊಳೆದು, ಒಂದು ಮುಷ್ಟಿ ಒಣ ಅವಲಕ್ಕಿ ತಂದರು.

“ಈ ಒಣ ಅವಲಕ್ಕಿ ಮುಕ್ಕು. ಥಂಡಿ ತಲೀ ಬಿಟ್ಟು ಕೆಳಗೆ ಇಳೀತದ” ಅಂದರು.

ಈ ಒಣ ಅವಲಕ್ಕಿಗೂ ಥಂಡಿಗೂ ಏನು ಸಂಬಂಧ! ಯಾವ ವೈದ್ಯಶಾಸ್ತ್ರದಲ್ಲಿ ಅವಲಕ್ಕಿ ಥಂಡಿಗೆ ಔಷಧಿ ಎಂದು ಬರೆದಿದ್ದಾರೆ ಎಂದೆನಿಸಿತು.

ಆದರೆ ತಾಯಿಯತ್ತ ವಿಷವೂ ಅಮೃತ. ಈ ಒಣ ಅವಲಕ್ಕಿ ರಾಮಬಾಣ ಏಕಾಗಬಾರದು.

ಸಾಗರಶಾಯಿಯಾದ ಶ್ರೀಕೃಷ್ಣ ಪರಮಾತ್ಮನಿಗೂ ಶೀತವಾಗುತ್ತೇ? ಅಂತಲೇ ಗೆಳೆಯ ಸುಧಾಮನನ್ನು ನೆನಸಿರಬೇಕು. ಅತ್ತಿಗೆ ಕಳಿಸಿದ ಒಣ ಅವಲಕ್ಕಿಯನ್ನೇ ಮುಕ್ಕಿ ‘ಶ್ರೀ ಕೃಷ್ಣಾರ್ಪಣಮಸ್ತು’ ಅಂದುಬಿಟ್ಟ.

ನಾನು ಒಣ ಅವಲಕ್ಕಿಯನ್ನ ಒಂದು ಮುಕ್ಕು ಮುಕ್ಕಿದೆ. ತಂಗಿ ಅಂದಳು “ಅವ್ವಾ ಈ ಒಣ ಅವಲಕ್ಕಿಗೆ ಮೊಸರು ಹಾಕಲ್ಲ.”

"ಹೌದು ಮೊಸರು ಅವಲಕ್ಕಿ ಚಟ್ನಿ ಪುಡಿ" ಎಂದೆ. ತಾಯಿ ನಕ್ಕರು.

"ಏನ ವಿಚಾರ ನಮ್ಮವ್ವಾ. ನೆಗಡಿ ಆಗೇದ ಅಂತ ಒಣ ಅವಲಕ್ಕಿ ಕೊಟ್ಟರ ಮೊಸರ ಹಾಕಿಸಿಗೋತೀದಿ."

ತಾಯಿ ಮೊಸರವಲಕ್ಕಿಯನ್ನೇ ಕಲಸಿ ತಂದರು. ಎಂಥ ಹಿರಿ ಜೀವ! ಸಮಾಧಾನದ ಮೂರ್ತಿ. ಸಿಟ್ಟಿಗೆದ್ದು ಗೊತ್ತಿಲ್ಲ.

ಮೊಸರವಲಕ್ಕಿ ಚಟ್ನಿಪುಡಿ ಹಾಕಿ ಕೊಟ್ಟರು. ಮೊಸರವಲಕ್ಕಿ ಬಾಯಿಗೆ ಹಾಕಿಕೊಂಡೆ. ತಾಯ ಕೈಯ ಮೊಸರವಲಕ್ಕಿ ಏನು ರುಚಿ!

ಮನಸ್ಸು ಪುಕ್ಕ ಪುಕ್ಕವಾಗಿ ಬಿಚ್ಚಿ ಹಕ್ಕಿಯಾಗಿ ಎಲ್ಲೆಲ್ಲೋ ಹಾರಿತು.

* * *

ಮೊಸರವಲಕ್ಕಿ ಅಂದರೆ ಮೊಸರು ಅವಲಕ್ಕಿ. ಅವಲಕ್ಕಿ ಮೊಸರಲ್ಲ ಮೊಸರವಲಕ್ಕಿಯ ರುಚಿ ಅವಲಕ್ಕಿ ಮೊಸರಿಗೆ ಬರದು. ಮೊಸರು, ಕೆನೆಕೆನೆಯಾಗಿ ಗಟ್ಟಿ ಇರಬೇಕು. ಗಡಿಗೆ ಮೊಸರಿದ್ದರಿಂತೂ ಬಲು ಸೊಗಸು. ಆ ಮೊಸರಿಗೆ ಅವಲಕ್ಕಿ ಉಪ್ಪು ಬೆರೆಸಿ, ಜೊತೆಗಿಷ್ಟು ಚಟ್ನಿಪುಡಿ ಇದ್ದರಾಯಿತು ಪಂಚಪಕ್ವಾನ್ನ ಉಂಡಗಿಂತ ಹೆಚ್ಚು ತೃಪ್ತಿ.

ಚೈತ್ರ ಪೂರ್ಣಿಮೆಯ ರಾತ್ರಿ ನದಿ ತೀರದಲ್ಲಿ ಮೊಸರವಲಕ್ಕಿ ತಿಂದವರಿಗೆ ಅದರ ರುಚಿ ಗೊತ್ತು. ಮನೆಯಲ್ಲಿ ಹಬ್ಬದ ದಿನ ಊಟ ಹೊತ್ತಾದಾಗಲೆಲ್ಲ ಮೊಸರವಲಕ್ಕಿ ಕಲಸಿ ಕೊಟ್ಟರೆ ಅಥವಾ ಹಚ್ಚಿದ ಅವಲಕ್ಕಿಗೆ ಮೊಸರು ಹಾಕಿದರೆ ಆಗುವ ಸಂಭ್ರಮ ವರ್ಣನಾತೀತ. ಶ್ರೀಕೃಷ್ಣ ಜನಾಷ್ಟಮಿ, ಚೈತ್ರ ಮಾಸದ ಗೌರಿಯನ್ನು ಕಳಿಸುವ ದಿನ ಆ ಮೊಸರವಲಕ್ಕಿ ರುಚಿಸಿದ ರಸಸ್ಮೃತಿ ನಾನು ಈ ದಿನದವರೆಗೂ ಮರೆತಿಲ್ಲ.

ನನ್ನ ತಾಯಿ ತೌರುಮನೆಗೆ ಹೋದಾಗಲೆಲ್ಲ ಅವಳ ಸೋದರತ್ತೆಯರು ಕಲಸುತ್ತಿದ್ದ ಮೊಸರವಲಕ್ಕಿ ನೆನಪಾಗುತ್ತದೆ. ಆ ವಿಧವೆ ಮಡಿ ಹೆಂಗಸರು ರಾತ್ರಿ ಫಲಹಾರ ಮಾಡುವುದನ್ನೇ ಕಾಯುತ್ತ ಕುಳಿತಿರಬೇಕು. ಅವರು ಮಡಿ ಉಟ್ಟುಕೊಳ್ಳುವುದೇ ತಡ ನಿದ್ರೆ ತುಂಬಿದ ಕಣ್ಣುಗಳನ್ನು ಬೆಳ್ಳಿಯ ಬಟ್ಟಲದಂತೆ ತೆಗೆದು ಕಳ್ಳ ಬೆಕ್ಕಿನಂತೆ ಅಡಿಗೆಮನೆ ಸೇರಬೇಕು. ಅವರನ್ನು ನೆನಸಿದಾಗೊಮ್ಮೆ "ಹಿಟ್ಟು ಅವಲಕ್ಕಿಗಳ ಮೂಲಕ್ಕೆ ಹುಟ್ಟಿದಳೋ" ಎಂಬ ಬೇಂದ್ರೆಯವರ ಮಾತು ಮರ್ಮಕ್ಕೆ ಹತ್ತಬೇಕು.



ಅವರಿಬ್ಬರ ಜೀವನ ಕಥೆ ತುಂಬಾ ವಿಷಾದಕರ. ಬಾಲ ವಿಧವೆಯರು, ಸಣ್ಣತ್ಯಾ ದೊಡ್ಡತ್ಯಾ ಇಬ್ಬರೂ ಮೊಸರವಲಕ್ಕಿ ನಮ್ಮ ಕೈಗೆ ಹಾಕಬೇಕು. ಅದರ ರುಚಿ ನಾಲಿಗೆಯ ಮೇಲೆ ಇನ್ನೂ ಉಳಿದಿದೆ. ಅವರಿಬ್ಬರ ಜೀವನವೂ ಅವಲಕ್ಕಿಯಂತೆಯೇ. ಕೆಸರಿನೊಳಗೆ ಬೆಳೆದು, ಕಾಲ ಕೆಳಗೆ ತುಳದು, ಕುಟ್ಟಿ ಕುಟ್ಟಿ ಬಿಳಿಯ ಪರಿಯಾಗಿ ನಿಂತ ಅವಲಕ್ಕಿ.

ತಿನ್ನಬಹುದಲ್ಲ ಎಂಬ ವಿಚಾರ ಮೂಡುತ್ತಿತ್ತು. ಆ ಮುಗ್ಧ ಮನಸ್ಸಿನ ಆಸೆ ಈಗ ನೆನದಾಗ ಎದೆ ಬಿರಿಯುತ್ತದೆ. ಯಾವ ಸೌಭಾಗ್ಯಕ್ಕೆ ಆ ಮೊಸರವಲಕ್ಕಿ!

* * *

ತಾಯಿ ಕಲಸಿದ ಮೊಸರವಲಕ್ಕಿಗೆ ಅದೇ ರುಚಿ. ಮೊಸರವಲಕ್ಕಿ ಕಲಸುವ ಕಲೆ ರಕ್ತಗತವಾಗಿ ಬಂದಿರಬೇಕು. ಕೈಯಲ್ಲಿದ್ದ ಮೊಸರವಲಕ್ಕಿ ಬಾಯಿಗೆ ಹಾಕಿದೆ. ತಾಯಿ ಕೇಳಿದರು "ಹುಳಿ ಆತೇನ? ಹಾಲು ಬೇಕೇನು?"

"ಬ್ಯಾಡಾ, ರುಚಿ ಆಗೇದ."

ತಾಯಿ ಮತ್ತೆ ರಂಜಕ ಅರೆಯಲು ಕುಳಿತರು. ನಿಂಬೆಹಣ್ಣಿನ ರಸ ಅರ್ಧಮರ್ಧ ನುರಿತ ಮೆಣಸಿನಕಾಯಿಗಳನ್ನು ಕಟ್ಟಿಗೆಯ ಚಮಚೆಯಿಂದ ಸರಿಸುತ್ತಿದ್ದರು. ಪಟ್ ಪಟ್ ಎಂದು ಸಪ್ಪಳ ಮಾಡುತ್ತ ಮೆಣಸಿನ ಕಾಯಿಗಳು ಒರಳಿನಲ್ಲಿ ನುಣ್ಣಗಾಗುತ್ತಿದ್ದವು. ಖಾರವಾಸನೆ ಆ ಕೋಣೆಯಲ್ಲೆಲ್ಲಾ ಹರಡಿತ್ತು. ಇದ್ದಿಲು ಒಲೆಯ ತನುಗೆಂಡದ ಮೇಲೆ ಹಾಲು ಕಾಯುತ್ತಿತ್ತು. ದೇವರ ಮುಂದಿನ ನಂದಾದೀಪದ ಎಣ್ಣೆ ಸೋರಿ ಗೋಡೆಯನ್ನೆಲ್ಲ ಜಿಡ್ಡಾಗಿಸಿತ್ತು. ಈ ದೇವರ ಪೂಜೆಗೆ ಬರುವ ಆಚಾರ್ಯರಿಗೆ ಸ್ವಚ್ಛತೆಯ ಅರಿವೇ ಇಲ್ಲ. ಸಾಲಿಗ್ರಾಮದ ನೆತ್ತಿಗಿಷ್ಟು ನೀರು ಹೊಯ್ದು, ಗಂಧವನ್ನಿಷ್ಟು ತೇಯ್ದು, ಯಾರ ಮನೆಯ ಪಂಚಾಯಿತಿಯನ್ನೆಲ್ಲ ಹೇಳುತ್ತ, ಮಂತ್ರ ಮರೆತು ದಕ್ಷಿಣೆ ಗಿಟ್ಟಿಸಿ ಹೋಗುವ ಆಚಾರ್ಯರ ಬಗ್ಗೆ ಕೋಪ ಬಂದಿತ್ತು.

ತಮ್ಮ ಗೆಳೆಯನೊಂದಿಗೆ ಬಂದ. ನಾವು ಮೊಸರವಲಕ್ಕಿ ತಿನ್ನುವುದನ್ನು ನೋಡಿ.

"ಅವ್ವಾ ನನಗ" ಎಂದು ಕೈ ಮುಂದೆ ಮಾಡಿದ.

ಆತನ ಮುಂದೆ ಚಾಚಿದ ಕೈ ನೋಡಿ ತಾಯಿ " ಪ್ಲೇಟ ತಗೋ ಹಾಕ್ತೀನಿ" ಅಂದರು. ಅವರ ಕಣ್ಣಲ್ಲಿ ನೀರಿತ್ತು.

"ಯಾಕ ಏನಾತು?" ನಾನು ಪ್ರಶಿಸಿದೆ.

"ಏನಿಲ್ಲ" ಖಾರದ ಕೈತೊಳೆದು ಸೆರಗಿನಿಂದ ಕಣ್ಣೀರನ್ನೊರೆಸಿಕೊಂಡರು.

" ಕಣ್ಣಾಗ ಮೆಣಸಿನಕಾಯಿ ಸಿಡಿತೇನು?"

"ಸುಮ್ಮನಿರು" ಸನ್ನೆ ಮಾಡಿದರು.

ತಮ್ಮನಿಗೂ ಆತನ ಗೆಳೆಯನಿಗೂ ಮೊಸರವಲಕ್ಕಿ ಕೊಟ್ಟು ಅವರು ತಮ್ಮ ಕೋಣೆಗೆ ಹೋಗುವುದನ್ನೇ ಕಾಯುತ್ತಿದ್ದ ತಾಯಿ ಹೇಳಿದರು.

"ಅವನ ಕೈ ನೋಡಿದರ ಏನೆಲ್ಲ ನೆನಪಾಗ್ತದ" ಅವರ ನೆನಪಿನ ಕೊಂಡಿ ಕಳಚಿತ್ತು. ತಂದೆಯವರ ಕೈಯನ್ನೇ ಹೋಲುವ ತಮ್ಮನ ಕೈ ತಾಯಿಯವರಿಗೆ ದುಃಖ ತರುತ್ತದೆ.

ತಂದೆಯವರಿಗೆ ಮೊಸರವಲಕ್ಕಿ ಬಲು ಪ್ರೀತಿ. ತಾಯಿ ಮೊಸರವಲಕ್ಕಿ ಕಲಸುವುದೇ ತಡ ಅವರು ಕೈಯೊಡ್ಡಿ ಮೊಸರವಲಕ್ಕಿ ತುತ್ತು ಹಾಕಿಸಿಕೊಂಡು ತಿನ್ನುವದು. ಪ್ಲೇಟ ಚಮಚೆಯಲ್ಲಿ ಅವರಿಗೆ ಅದು ರುಚಿಸುತ್ತಿರಲಿಲ್ಲ.

ಕೈ ನೆಕ್ಕುತ್ತ, ಬೆರಳು ಚೀಪುತ್ತ ಸುರ್ರೆಂದು ಸಪ್ಪಳ ಮಾಡುತ್ತ, ಅಡ್ಡಾಡುತ್ತ ಮೊಸರವಲಕ್ಕಿ ತಿನ್ನುತ್ತಲೇ ಇರಬೇಕು.

"ಕೈ ಚೀಪಿಗೋಳೋ, ಹಾಲು ಮೊಸರು ಸೋರತದ. ಯಾರದಾದ್ದು ಕಣ್ಣ ಹತ್ಯಾವೋ" ಎಂದು ಅಜ್ಜಿಯ ಜೀವ ಏನೆಲ್ಲ ಆಡುತ್ತಿರಬೇಕು. ಆ ತಾಯ ಮಾತಿನ ಪರಿವೆಯಿಲ್ಲದೇ ಅವರು ಮೊಸರವಲಕ್ಕಿ ತಿನ್ನುತ್ತಿರಬೇಕು.

ನನ್ನ ಕಕ್ಕಂದಿರಿಬ್ಬರಿಗೂ ಮೊಸರವಲಕ್ಕಿ ಪ್ರೀತಿ. ಅಣ್ಣತಮ್ಮಂದಿರು ಚಿಕ್ಕವರಿರುವಾಗ ತಾಯಿ ಮೊಸರವಲಕ್ಕಿ ಕೊಡುತ್ತಿರಲಿಲ್ಲ. ಆಗ ಈ ಮೂವರೂ ಒಬ್ಬರಿಗೆ ಒಬ್ಬರು ಹೇಳಿಕೊಳ್ಳುತ್ತಿದ್ದರಂತೆ. " ಅವ್ವ ಸತ್ತರ ಮೊಸರವಲಕ್ಕಿ ಸಿಗ್ತದ" ಎಂದು. ಆ ಮಾತನ್ನು ದೊಡ್ಡವರಾದ ಮೇಲೆ ನೆನಸಿ ನಗುತ್ತ ಮೊಸರವಲಕ್ಕಿ ಮಹಿಮೆ ಹೇಳುತ್ತಿದರು.

ಒಮ್ಮೊಮ್ಮೆ ತಂದೆಯವರೇ ಸ್ಪೆಶಲ್ ಮೊಸರವಲಕ್ಕಿ ತಯಾರಿಸಬೇಕು, ಹಸಿಮೆಣಸಿನಕಾಯಿ, ಕೊತ್ತಂಬರಿ, ಉಳ್ಳಾಗಡ್ಡಿ ಸಣ್ಣಗೆ ಹೆಚ್ಚಿ ಬೆರಸಬೇಕು. ಮೇಲೆ ತುಪ್ಪದ ಒಗ್ಗರಣೆ, ಒಗ್ಗರಣೆಯಾದದ್ದು ಅವರಿಗೆ ತಿಳಿಯದು, ತಮ್ಮ ತಾಯಿಯನ್ನು ಕೇಳಬೇಕು, ನಂತರ "ನೀವು ಹೆಂಗಸೂರಿಗೆ ಹ್ಯಾಂಗ ರುಚಿ ಮಾಡಬೇಕು ಅನ್ನೋದು



ಗೊತ್ತಿಲ್ಲ. ನಿಮಗ ವ್ಹೆರಾಯಿಟಿ ಇಲ್ಲ, ನಾ ಹ್ಯಾಂಗ ರುಚಿ ಮಾಡೇನಿ" ಎಂದು ತಮ್ಮ ಬೆನ್ನು ಯಾವೇ ಚಪ್ಪರಿಸಿಕೊಳ್ಳುತ್ತ ಎಲ್ಲರ ಕೈಗೂ ಮೊಸರವಲಕ್ಕಿ ತುತ್ತು ಹಾಕಬೇಕು, ಮೆಣಸಿನಕಾಯಿಯನ್ನು ಕಟ್ಟನೇ ಕಡಿದು ನಾವು 'ಹಾ' ಎಂದು ಚೀರಿಕೊಂಡು, ಬಾಯಲ್ಲಿಯ ತುತ್ತನ್ನು ಥೂ ಎಂದು ಉಗುಳಿ ನೀರು ಕುಡಿಯಲು ಓಡಿದಾಗ "ಹೇಡಿಗಳು ಮೆಣಸಿನಕಾಯಿ ತಿನ್ನಲಿಕ್ಕೆ ಆಗೋದಿಲ್ಲ" ಎಂದು ಬೈಯ್ಯಬೇಕು. ತಂದೆಯವರು ಈಗಿಲ್ಲ. ಮೊಸರವಲಕ್ಕಿಯ ಮೇಲಿದ್ದ ಅವರ ಪ್ರೀತಿ ನಮಗೆಲ್ಲಾ ಅವರ ಮಧುರಸ್ಮೃತಿ

ಕೂತಲ್ಲಿಂದ ಕಿಡಿಕಿಯಾಚೆ ಕಣ್ಣಾಡಿತು. ಮೂರು ದಿನದಿಂದ ಕಣ್ಣು ಮುಚ್ಚಿ ಧೋ ಎಂದು ಸುರಿಯುತ್ತಿದ್ದ ಮಳೆ ನಿಂತಿದ್ದರೂ ಮೋಡಗಳು ಹನಿಯೊಡೆಯಲು ಕಟ್ಟಿಕೊಂಡು ನಿಂತಿದ್ದವು. ಬಕುಲದ ಗಿಡದಿಂದ ಹೂಗಳು ನೆಲಕ್ಕೆಲ್ಲಾ ಸುರಿದಿದ್ದವು. ನುಗ್ಗಿಯಕಾಯಿ ತುಂಬಾ ಬಿಟ್ಟಿದವು. ನಾಳೆ ಗುರುಪಾದನಿಗೆ ಹೇಳಿ ನುಗ್ಗಿಕಾಯಿ ತೆಗೆಯಿಸಬೇಕು. ತಂದೆಯವರಿದ್ದಾಗ ಈ ಮನೆಗೆ ಯಾವ ವೈಭವ! ಏನು ದರಬಾರ! ಸಂಜೆ ಅಂಗಳದ ತುಂಬೆಲ್ಲ ಅವರ ಮಿತ್ರ ಮಂಡಳಿ, ಒಲೆಯ ಮೇಲಿನ ಚಹದ ಪಾತ್ರೆ ಕೆಳಗಿಳಿಯುತ್ತಿರಲಿಲ್ಲ. ಎಷ್ಟೊಂದು ಜನ ನಿತ್ಯ ಊಟಕ್ಕೆ! ಎಷ್ಟು ಬಡ ವಿದ್ಯಾರ್ಥಿಗಳು ಮನೆಯಲ್ಲಿ! ಆ ದಿನ ನಾನು ನನ್ನ ಸಹಪಾಠಿಗಳನ್ನೂ, ಪ್ರಾಧ್ಯಾಪಕರನ್ನೂ ಕರೆದುಕೊಂಡು ರಾತ್ರಿ ಮನೆಗೆ ಬಂದಾಗ, ತಂದೆ ಪಿಕ್‌ನಿಕ್‌ನಿಂದ ದಣಿದ ಅವರಿಗೆಲ್ಲ ಮೊಸರವಲಕ್ಕಿ ಮಾಡಿಸಿಕೊಟ್ಟು ಆದರದ ಸ್ವಾಗತ ಮಾಡಿದ ನೆನಪು ಬಂದು ಮೊಸರವಲಕ್ಕಿಯ ತುತ್ತು ಗಂಟಲದಲ್ಲಿ ಸಿಕ್ಕಿತು ನಾನು ಬಿಕ್ಕಿದೆ.

"ಅಲ್ಲ ಮೊಸರಲವಕ್ಕಿ ತಿನ್ನು, ಏನ ನೆನಪಾತು? ಅಳತೀ ಯಾಕ? ಹಿಂದಿನದೆಲ್ಲಾ ಕನಸು ಮರೆತುಬಿಡಬೇಕು" ಎಂದು ತಾಯಿ ಹೇಳಿದರು.

ಹೊರಗೆ ಗುಡುಗುವ ಶಬ್ದ. ಮನಸ್ಸು ಕದಡಿತ್ತು. ತಾಯಿ ರಂಜಕ ಅರೆಯುವುದನ್ನು ಮುಗಿಸಿದ್ದರು. ಒಲೆಯ ಮೇಲಿಟ್ಟ ಹಾಲು ಕಾದು ಉಕ್ಕು ಬಂದಿತ್ತು. ತಾಯಿ ತುದಿಬಟ್ಟೆನಿಂದ ಹಾಲಿನ ಪಾತ್ರೆ ಕೆಳಗಿಳಿಸಿ ಪಕ್ಕದಲ್ಲಿದ್ದ ಕಬ್ಬಿಣ ಸೌಟಿನ ಹಿಂಬದಿಯಿಂದ ಕೆಂಡ ಕೆದರಿ, ಆಡಿಸಿ, ಬೂದಿ ಕೆಳಗಿಳಿಸಿದರು. ಒಲೆಯಲ್ಲಿ ಮತ್ತೆ ಇದ್ದಿಲು ತುಂಬಿ ಕಡೆದು ತೆಗೆದಿಟ್ಟ ಬೆಣ್ಣೆ ಕಾಯಿಸಲು ಒಲೆಯ ಮೇಲಿಟ್ಟರು.

ನಾನು ಮೊಸರವಲಕ್ಕಿ ತುತ್ತು ಮತ್ತೆ ಬಾಯಿಗೆ ಹಾಕಿದೆ. ಕಣ್ಣಲ್ಲಿ ನೀರಿತ್ತು. ಕೆಚ್ಚಲ ಗುದ್ದಿ ಹಾಲು ಕುಡಿಯುತ್ತಿದ್ದರೂ, ಆ ನೋವನ್ನು ಸಹಿಸಿಕೊಂಡು, ಕರುವಿನ ಮೈ ನೆಕ್ಕಿ ಮೂಸಿ ಮೂಸಿ ನೋಡಿ ಪ್ರೀತಿಸುವ ಆಕಳದಂತೆ ತಾಯಿ ಬೆನ್ನ ಮೇಲೆ

ಕೈಯಾಡಿಸಿ ಹೇಳಿದರು. "ಸಮಾಧಾನ ಮಾಡಕೋ. ಮೊಸರವಲಕ್ಕಿ ತಿನ್ನು, ಬೆರತ ಹೋಗತದ" ಅಂದರು.

ತಲೆ ಬುಗುರಿಯಾಗಿ ಸುತ್ತಿತ್ತು.

* *

ಆ ದಿನ ಮಟ ಮಟ ಮಧ್ಯಾಹ್ನ. ಬಿಸಿಲಿನ ತಾಪಕ್ಕೆ ಮೆಲುಕಾಡಿಸುವದನ್ನು ಬಿಟ್ಟು ಗಿಡದ ನೆರಳಿಗೆ ಮಲಗಿದ ಎಮ್ಮೆಗಳು. ಗಾಳಿಯ ಸುಳಿವಿಲ್ಲದೇ ದಂಡನಾಯಕರ ಆಜ್ಞೆಯನ್ನು ಕಾಯುತ್ತ ನಿಂತ ಸೈನಿಕರಂತೆ ಅಲುಗಾಡದೆ ನಿಂತು ಗಿಡಗಳು. ಭರ್ ಭರ್ ಒಂದರಮೇಲೊಂದು ಓಡುತ್ತಿದ್ದ ಬಸ್ಸುಗಳು. ನನ್ನ ನೆರಳನ್ನೇ ನಾನು ತುಳಿಯುತ್ತ ಕಾಲೇಜಿನ ಪಾಠ ಮುಗಿಸಿ ಮನೆಗೆ ಹೊರಟಿದ್ದೆ.

ಹುಬ್ಬಳ್ಳಿಯ ಅಶೋಕ ನಗರದಲ್ಲಿ ನಮ್ಮ ಮನೆ. ವಿದ್ಯಾನಗರ ಕಾಲೇಜಿನಲ್ಲಿ ನಾನು ಪ್ರಾಧ್ಯಾಪಿಕೆ. ಕರ್ನಾಟಕದ ಮೆಡಿಕಲ್ ಕಾಲೇಜಿನ ಹತ್ತಿರ ಬಂದಾಗ, ಧಾರವಾಡ ಬಸ್ಸಿಗೆ ಬಂದ ಮಾವನವರು ಅಲ್ಲಿಯೇ ಇಳಿದು, ಮೆಡಿಕಲ್ ಕಾಲೇಜಿನ ಕ್ಯಾಂಪಸ್ಸಿನಲ್ಲಿ ಹಾದು ಮನೆಗೆ ಹೊರಟಿದ್ದರು.

ಶುಭ್ರ ಧೋತರ, ತಲೆಗೊಂದು ಕರಿ ಟೊಪ್ಪಿಗೆ, ಅರ್ಧ ಬಿಳಿ ಶರ್ಟಿನ ಮೇಲೆ ಉಲನ್ ಕೋಟು, ಕಾಲಲ್ಲಿ ಚರ್ಮದ ಚಪ್ಪಲಿ, ಉದ್ದಕೋಲು ದೇಹದ ಮಾವನವರ ನಡಿಗೆ ದೂರದಿಂದಲೇ ಗುರುತಿಸಿದೆ.

"ಮಾಮಾ" ಎಂದು ಕೂಗಿದೆ. ತಿರುಗಿ ನೋಡಿ ನಿಂತರು. ಧಾವಿಸಿ ಹೋಗಿ ಅವರನ್ನು ಕೂಡಿದೆ.

"ಈಗ ಕಾಲೇಜಿನಿಂದ ಬಂದೇನವ್ವಾ. ನೀ ಭೆಟ್ಟಿಯಾತು ಛಲೋ ಆತು. ಇಲ್ಲಾಂದ್ರ ನೀ ಬರೋತನಕ ಬಾಗಲದಾಗ ಕೂಡಬೇಕಾಗತಿತ್ತು."

"ಎಂಥಾ ಬಿಸಿಲಾಗ ಬಂದ್ರಿ. ಆಟೋ ರಿಕ್ಷಾ ತಗೊಂಡು ಮನಿಗೆ ಹೋಗೋಣೇನು?"

"ಬ್ಯಾಡವ್ವಾ, ಆ ಹಂದಿಮೂತಿ ರಿಕ್ಷಾದ ಕೂಡುದಕ್ಕಿಂತ ದೇವರ ಕೊಟ್ಟ ನಮ್ಮ ಕಾಲ ಛಲೋ,"

ಮಾವನವರಿಗೆ ರಿಕ್ಷಾ ಅಂದರೆ ಬಲು ವಿರೋಧ. ಹೊಟ್ಟೆಯಲ್ಲಿಯ ಕರುಳನ್ನೇ ಬಾಯಿಗೆ ತರಿಸುವ ಆ ರಿಕ್ಷಾಗಳ ಓಟ ಅವರಿಗೆ ಎಳ್ಳಷ್ಟೂ ಹಿಡಿಸುತ್ತಿರಲಿಲ್ಲ.



"ಈ ರಿಕ್ಷಾದಾಗ ಕೂತ್ರ ದಿನತುಂಬಿದ ಗರ್ಭಿಣಿ ಹೆಂಗಸೂರಿಗೆ ಸುಸೂತ್ರ ಪ್ರಸವ" ಎಂದು ನಕ್ಕು ನಗಿಸಿದರು.

"ನೀವು ಈಗ ಬೆಳಗಾಂವಿಯಿಂದ ಬಂದ್ರೇನು?" ಎಂದು ಪ್ರಶ್ನಿಸಿದೆ.

"ಇಲ್ಲ. ಮುಂಜಾನೆ ಧಾರವಾಡಕ್ಕ ಬಂದಿದ್ದೆ. ಅಲ್ಲೇ ಊಟಾ ಮಾಡಿ ಹೊಂಟೆ" ಅಂದರು.

ಮಾವನವರೊಡನೆ ನಡೆಯುವುದು ಬಲು ಕಠಿಣ. ಅವರ ಒಂದು ಹೆಜ್ಜೆಗೆ ನನ್ನ ಐದು ಹೆಜ್ಜೆ ಬೀಳುತ್ತಿದ್ದವು, ಇಂಥ ವಯಸ್ಸಿನಲ್ಲೂ ಎಷ್ಟು ಹುರುಪಿನ ತೀವ್ರ ನಡಿಗೆಯೆನಿಸಿತು.

"ಯಾಕವ್ವ ದಮ್ಮು ಹತ್ತೇನು? ನನ್ನ ಜೋಡಿ ನಡಿಯೂದಂದ್ರ  .." ಎಂದು ಆ ಮಾತು ಅರ್ಧಕ್ಕೆ ನಿಲ್ಲಿಸಿದರು.

"ಊರಿಗೆ ಹೋಗಬೇಕಾಗಿತ್ತೇನವ್ವಾ. ಎಲ್ಲೂ ಟಾಂಗಾ ಸಿಗಲಿಲ್ಲ. ನಮ್ಮ ಮನ್ಯಾಗ ಇವರೂ ನಾನೂ ಕೂಡೇ ಹೊರಟೇವಿ. ನಾ ಸ್ಟೇಶನ್ನಕ್ಕ ಮುಟ್ಟಿ ಚಹಾ ಕುಡದು ಇನ್ನೂ ಯಾಕ ಇವರ ಬಂದಿಲ್ಲಾಂತ ಹುಡುಕಿ ಹೊರಟರ ಅರ್ಧಾ ರಸ್ತೆಕ್ಕ ಸಿಕ್ಕರು. ಅವರದು ಆಮೆ ನಡಿಗೆ" ಎಂದು ಹೆಂಡತಿಯನ್ನು ನೆನಸಿ ನಕ್ಕರು.

ಅತ್ತೆ ಮಾವನವರಲ್ಲಿ ಎಲ್ಲದರಲ್ಲೂ ವ್ಯತ್ಯಾಸ. ಆದರೆ ಅವರಿಬ್ಬರಲ್ಲಿದ್ದ ಪ್ರೀತಿ ನಮಗೆಲ್ಲ ಆದರ್ಶ.

ಅತ್ತೆ ನಿಧಾನ. ಮಾವ ತ್ವರಿತ. ಅತ್ತೆಯವರದು ಮುತ್ತಿನಂತೆ ಹೊಳೆಯುವ ಕೆಂಪು ಬಣ್ಣ. ಮಾವನವರದು ಸಾಲಿಗ್ರಾಮ ಮಿಂಚು. ಅತ್ತೆ ಚಲುವೆ. ಕೊಲ್ಲಾಪುರ ಮಹಾಲಕ್ಷ್ಮಿಯ ರೂಪ. ಅದೇ ಗಿಡ್ಡ ಮಾಟ ಮೈಕಟ್ಟು, ಮಾವನವರು ಉದ್ದ ನೀಳ ದೇಹ. ನೀಟವಾದ ಮೂಗು. ತೇಜಪುಂಜಿತ ಕಣ್ಣುಗಳು. ಗದುಗಿನ ವೀರ ನಾರಾಯಣನನ್ನು ನೋಡಿದಂತೆ.

ಒಂದು ದಿನ ನನ್ನ ಯಜಮಾನರು ತಾಯಿಗೆ ಕೇಳಿದರಂತೆ "ಅವ್ವಾ ನೀಯೆಷ್ಟು ಕೆಂಪು ಇದ್ದೀ ಮಾಮಾ ಕಪ್ಪು ಇದ್ದಾರ. ಹ್ಯಾಂಗ ಲಗ್ನ ಮಾಡಿಕೊಂಡಿ?" ಎಂದು.

ಅದಕ್ಕೆ ಅತ್ತೆಯವರು ಮಗನ ತುಂಟ ಮಾತಿಗೆ "ಕರೇ ಕಸ್ತೂರಿ ವರಹಕ್ಕೆ ಸೇರು" ಎಂದು ಉತ್ತರಿಸಿದರಂತೆ.

ಅಷ್ಟೊಂದು ಪತಿಯ ಬಗ್ಗೆ ಆದರ, ಪ್ರೀತಿಯಿದ್ದ ಅತ್ತೆಯವರು ಮಾವನವರ ಮಾತನ್ನು ಜೀವನದಲ್ಲಿ ಎಂದೂ ತೆಗೆದು ಹಾಕಲಿಲ್ಲ. ಮಾವನವರಿಗೆ ಪ್ರಿಯವಾದ

ಒಂದು ವಿಷಯ ಇಸ್ಪೀಟು ಆಟ. ಅದಕ್ಕಾಗಿ ಅವರಿಬ್ಬರಲ್ಲಿ ವೈಮನಸ್ಸಾಗಿ ಮನಸ್ತಾಪವಾದಾಗ ಅದನ್ನು ಅವರು ಎಂದಿಗೂ ಮುಂದುವರಿಸಲಿಲ್ಲ. ಮಾವನವರು ಅಳಿಯದೇವರನ್ನೇ ಕರೆದುಕೊಂಡು ಆಡಲು ಹೋಗಿಬಿಡುತ್ತಿದ್ದರು. ಮನೆಯಲ್ಲಿ ಹೆಂಡತಿಯೆದುರಿಗೆ ಎಂದೂ ಆಡಲಿಲ್ಲ. ಹೆದರಿಕೆ ಅಲ್ಲ. ಹೆಂಡತಿಗೆ ಅವರು ಕೊಡುತ್ತಿದ್ದ ಮರ್ಯಾದೆ.

ಮನೆ ಮುಟ್ಟಿ ಚಹಾ ಕುಡಿದೆವು. ಆ ಮಾತು ಈ ಮಾತು ಆಡುವುದರಲ್ಲಿ ಸಂಜೆಯಾಗಿತ್ತು. ಮಗನ ದಾರಿ ಕಾಯುತ್ತ, ಮನೆಯೆದುರಿನ ಕಟ್ಟೆಯ ಮೇಲೆ ಕುಳಿತ ಅವರಿಗೆ ನಾನು ಕೇಳಿದೆ "ಮಾಮಾ ಮೊಸರವಲಕ್ಕಿ ಕಲಸಿ ಕೊಡಲೇನು?"

"ವ್ಹಾ ಭೇಶ್ ಕಲಸವ್ವಾ."

ತುಪ್ಪದ ಒಗ್ಗರಣೆ ಹಾಕಿ ಕೆನೆಮೊಸರಲ್ಲಿ ಅವಲಕ್ಕಿ ಕಲಸಿದೆ. ಸಂಡಿಗೆ ಗುಂಬಳ ಖಾರಸಂಡಿಗೆ, ಅವಲಕ್ಕಿ ಹಪ್ಪಳ ಕರಿದೆ. ಅವರಿಗೆ ಬಲು ಖುಷಿಯಾಯಿತು.

ಅದೇ ಮೊದಲ ಸಲ ನಾನವರಿಗಾಗಿ ತಿಂಡಿ ತಯಾರಿಸಿ ಕೊಟ್ಟದ್ದು. ಮೊಸರವಲಕ್ಕಿ ಬಾಯಿಗೆ ಹಾಕಿದ ಅವರು "ಏನ ಅಪರೂಪ ಆಗೇದವ್ವಾ"ಎಂದರು,

ತಿಂದು ಮುಗಿಸಿದ ಮೇಲೆ "ಭಾಳ ಆರಾಮ ಮಾಡಿಸಿದೆವ್ವಾ. ಹೊಟ್ಟೆ ಶಾಂತ ಆತು. ಅನ್ನ ದಾತಾ ಸುಖೀ ಭವ" ಎಂದು ತೇಗಿದರು.

ಆ ತುತ್ತು ಮೊಸರವಲಕ್ಕಿಯಿಂದ ತೃಪ್ತಿಪಟ್ಟ, ಆ ಹಿರಿ ಜೀವ ನನ್ನನ್ನು ಸಂಪೂರ್ಣ ಮನಸ್ಸಿನಿಂದ ಆಶೀರ್ವದಿಸಿತ್ತು.

ಈ ಅವಲಕ್ಕಿಯ ಮಹಿಮೆಯೇ ಅಂತಹದು. ಒಂದು ಮುಕ್ಕು ಒಣ ಅವಲಕ್ಕಿ ಮುಕ್ಕಿದ ಶ್ರೀ ಕೃಷ್ಣ ಸುಧಾಮನಿಗೆ ಐಶ್ವರ್ಯವನ್ನೇ ಕೊಟ್ಟ.

ಪಾಪ ಸುಧಾಮನ ಮನೆಯಲ್ಲಿ ಎಣ್ಣೆ ಒಗ್ಗರಣೆ ಕಾಳಿಗೂ ಗತಿಯಿರಲಿಲ್ಲ. ಗೆಳೆಯನಿಗಾಗಿ ಚಿಂದಿ ಅರಿವೆಯ ಗಂಟಿನಲ್ಲಿ ಒಣ ಅವಲಕ್ಕಿ ತಂದಿದ್ದ. ಶ್ರೀಕೃಷ್ಣ ಮುಕ್ಕಿದ್ದು ಒಣ ಅವಲಕ್ಕಿಯಲ್ಲ ಸುಧಾಮನ ಪ್ರೀತಿ.

ಮಾವನವರು ಹೇಳಿದರು,. "ತಿನ್ನಲಿಕ್ಕೆ ಕೊಡೋ ಮುಂದೆ ಮುಕ್ತ ಮನಸ್ಸಿನಿಂದ ಕೊಡಬೇಕವ್ವಾ. ಎಲ್ಲರ ರುಚಿ ಅಭಿರುಚಿ ತಿಳಿದಿರಬೇಕು. ಅವರಿಗೆ ಹೊಟ್ಟೆಗೆ ಹಿತವಾಗುವಂತಹ ತಿನಿಸು ಹಸಿವಾದಾಗ ಕೊಟ್ರ ಪುಣ್ಯಾ ಬರ್ತದವ್ವಾ."

ಬಿಸಿಲಿನ ತಾಪದಿಂದ ಬಳಲಿ ಬಂದ ಆ ಮುಪ್ಪಿನ ಜೀವಕ್ಕೆ ನಾನಿತ್ತ ಮೊಸರವಲಕ್ಕಿ ಹಿತಕರವಾಗಿತ್ತು. ಅವರಿಗೆ ಮೊಸರವಲಕ್ಕಿ ಅತ್ಯಂತ ಪ್ರೀತಿಯ ಖಾದ್ಯ.



ಮಗನನ್ನು ಭೆಟ್ಟಿಯಾಗಿ ಊರಿಗೆ ಹೊರಟರು. ಹೋಗುವಾಗ "ಮೊಸರವಲಕ್ಕಿ ಭಾಳ ಅಪರೂಪ ಆಗಿತ್ತವ್ವಾ. ರುಚಿ ಅಭಿರುಚಿ ತಿಳೀತು. ನಿನಗ ಅಡಿಗಿ ಬಂತು" ಎಂದು ಹೇಳಿದರು.

"ಗಣೇಶ ಚೌತಿಗೆ ಬೆಳಗಾಂವಿಗೆ ಬರ್ರಿ ಅಂತ ಹೇಳ್ಯಾಳ. ಇಬ್ಬರೂ ಬರ್ರಿ" ಎಂದು ಮಗನಿಗೆ ಹೆಂಡತಿ ಕಳಿಸಿದ ಸುದ್ದಿ ಮುಟ್ಟಿಸಿ,

"ಆಕಿ ನೆನಸತಿರತಾಳ ಪತ್ರಾ ಬರಿ" ಎಂದು ಹೇಳಿ ಹೊರಟರು.

ಬೆಳಗಾಂವಿಗೆ ಹೋಗಿ ಮಾವನವರು ನನ್ನನ್ನು ಮೊಸರವಲಕ್ಕಿ ಎಕ್ಸ್‌ಪರ್ಟ್ ಎಂದು ಪ್ರಸಿದ್ಧ ಮಾಡಿಯೇ ಬಿಟ್ಟರು. ಅತ್ತೆಯವರಿಗೆ ಹೇಳಿದರಂತೆ " ಎಂಥಾ ಮೊಸರವಲಕ್ಕಿ ಕಲಸಿದ್ದಳು ನಿನ್ನ ಸೊಸಿ. ಭಾಳ ಅಪರೂಪ ಆಗಿತ್ತು."ಮನೆಗೆ ಬಂದು ಹೋಗುವವರಿಗೆಲ್ಲ, ಬಳಗಕ್ಕೆ, ಸೊಸೆಯ ಮೊಸರವಲಕ್ಕಿ ವರ್ಣನೆ ಅವರು ಮಾಡಲೇಬೇಕು.

ಅವರ ಹೊಗಳಿಕೆಯಿಂದ ಬೇಸತ್ತ ಜನರೂ ಇದ್ದರು. "ಮೊಸರವಲಕ್ಕಿ ಕಲುಸುದೇನು ಮಹಾ. ಮೊಸರು ರುಚಿ ಇದ್ರ ಮೊಸರವಲಕ್ಕಿ ತಾನ ರುಚಿಯಾಗತದ" ಎಂದು ಅವರ ಮಾತಿಗೆ ಪ್ರತಿ ಮಾತನಾಡಿದವರೂ ಇದ್ದರು.

ತೀಕ್ಷ್ಣ ಮತಿಗಳು ಅಸೂಯೆಯಿಂದ "ಮೊಸರವಲಕ್ಕಿಗೆ ನೈಸರ್ಗಿಕ ರುಚಿ ಅದ. ಅದಕ್ಕ ಪಾಕ ಕಲಾದ ಅವಶ್ಯಕತೆಯಿಲ್ಲ" ಎಂದು ಚುಚ್ಚಿ ನುಡಿದಿದ್ದರಂತೆ.

ಅದಕ್ಕೆ ಮಾವನವರು "ದೇವರಿತ್ತ ಸೌಂದರ್ಯಕ್ಕ ಅಲಂಕಾರ ಬೇಕು. ಯೋಗ್ಯ ಅಲಂಕಾರ ಒದಗಿಸೋದ ಕಲಾ. ಹಾಂಗ ಮೊಸರು, ಅವಲಕ್ಕಿ ಎರಡರ ನೈಸರ್ಗಿಕ ರುಚಿಯನ್ನು ಅಧಿಕಗೊಳಿಸುವದ ಮೊಸರವಲಕ್ಕಿ ಕಲಸೋ ಕಲಾ" ಎಂದು ಹೇಳಿ ಜನರ ಬಾಯಿ ಮುಚ್ಚಿಸಿದರಂತೆ.

ಈ ಮಾತನ್ನು ಅವರು ನನ್ನೆದುರಿಗೆ ಹೇಳಿದಾಗ ಹೃದಯ ತುಂಬಿ ಬಂದಿತ್ತು. ಅನ್ನವಾದದ್ದು ತಿಳಿಯದ ನನಗೆ ಅವರ ಅಂತಃಕರಣದ ಪ್ರಶಂಸನೆಯಿಂದ ಅಡಿಗೆ ಮಾಡಲು ಬಂತು.

ಸವದತ್ತಿಗೆ ಹೊಲದ ಕೆಲಸಕ್ಕೆ ಮೇಲಿಂದ ಮೇಲೆ ಹೋಗುತ್ತಿದ್ದ ಅವರು ಧಾರವಾಡಕ್ಕೆ ಬಂದಾಗಲೊಮ್ಮೆ ಹುಬ್ಬಳ್ಳಿಗೆ ಬರುತ್ತಿದ್ದರು. ಆ ದಿನ ರಾತ್ರಿ ಮೊಸರವಲಕ್ಕಿ ಪ್ರೋಗ್ರಾಮ ಆಗಲೇಬೇಕು. ಪ್ರತಿಸಾರೆ ಅವರು ನನ್ನನ್ನು ಹೊಗಳಲೇಬೇಕು. ಅವರ ಹೊಗಳಿಕೆಯಿಂದ ನನ್ನ ಮೊಸರವಲಕ್ಕಿಗೆ ರುಚಿ ಏರಬೇಕು.

"ಈ ಮೊಸರವಲಕ್ಕಿಗೆ ನಿನ್ನ ಅಂತಃಕರಣ ಕೂಡಿ ಪರಿಮಳ ಬಂದದ ನೋಡವ್ವಾ" ಎಂದು ಒಂದು ದಿನ ಹೇಳಿದರು. ಅದೇ ನಾನವರಿಗೆ ಕೊನೆಯ ಸಾರೆ ಕಲಸಿಕೊಟ್ಟ ಮೊಸರವಲಕ್ಕಿಯಾಗಿತ್ತು.

ಬರಬರುತ್ತ ಅವರ ಪ್ರಕೃತಿ ಕ್ಷೀಣವಾಗಿ ಮೇಲಿಂದ ಮೇಲೆ ಹುಬ್ಬಳ್ಳಿಗೆ ಬರುವುದಾಗುತ್ತಿರಲಿಲ್ಲ. ನಾವು ಬೆಳಗಾವಿಗೆ ಹೋದಾಗಲೊಮ್ಮೆ ಹೇಳಬೇಕು.

"ಮೊಸರವಲಕ್ಕಿ ಪ್ರೋಗ್ರಾಮ್ ಮಾಡಸವ್ವಾ" ಎಂದು. ಅವರ ನಾಲಿಗೆಗೆ ರುಚಿ ಕಡಿಮೆಯಾಗಿತ್ತು.

ಅತ್ತೆಯವರು ಹೇಳಬೇಕು. "ಪ್ರತಿದಿನಾ ನಿನ್ನ ನೆನಸತಾರ. ನಿನ್ನ ಮೊಸರವಲಕ್ಕಿ ನೆನಪಾತು ಅಂದ್ರ ಅವರಿಗೆ ಹುಬ್ಬಳ್ಳಿಗೆ ಹೋಗಬೇಕು ಅನ್ನಸತದ."

ರಸಿಕರಾದ ಮಾವನವರಿಗೆ ಊಟದ ರುಚಿ ಹೆಚ್ಚು, ಅತ್ತೆಯವರ ಕೈ ಅಡಿಗೆ ಬಲು ರುಚಿ ಪ್ರಸಿದ್ಧ. ಹೆಂಡತಿಯನ್ನು ಹೊಗಳಿದಷ್ಟು ತೆಗಳುತ್ತಿದ್ದುದೂ ಉಂಟು.

"ಏನ ಅಪರೂಪ ಆಗೇದ ಸಾರು!" ಎಂದು ಹೊಗುಳುವ ಅವರು,

"ಸಾರೋ ಸೀಗೆಕಾಯಿ ನೀರೋ?" ಎಂದು ಕೇಳಿದ್ದುಂಟು.

"ಚಕ್ಕಲಿ ರಬ್ಬರ ಎಳದ್ಹಾಗ ಆಗ್ಯಾವ. ಒಗ್ಗರಣಿ ಕಾಸಿದ ಭಾಂಡಿಯೊಳಗೆ ಬಟಾಟಿ ಹೋಳು ಒರಸಿ ತಗದ್ಹಂಗ ಆಗೇದ. ಬಟಾಟಿ ಪಲ್ಲ್ಯಾನ ಇದು" ಎಂದು ನಕ್ಕಿದ್ದೂ ಉಂಟು.

"ನಿಮಗ ವಯಸ್ಸಾತು, ಅಡಿಗಿ ಮರತ ಹೋಗೇದ. ಹಲಸಿನ ಕಾಯಿ ಪಲ್ಲ್ಯಾಕ್ಕ ಉಪ್ಪ ಹಾಕಿಲ್ಲ" ಎಂದು ಹೆಂಡತಿಗೆ ಎಚ್ಚರಿಸಿದಾಗ,

"ಮರೆತಿರಬೇಕು. ಉಪ್ಪು ಹಚ್ಚಿಕೊಳ್ಳಿರಿ."

"ಎಲ್ಯಾಗ ಉಪ್ಪು ಹಚ್ಚಿಕೊಂಡ್ರ ಪದಾರ್ಥದ ರುಚಿ ಮುಗೀತು" ಎಂದು ಮಾತಿಗೆ ಪೂರ್ಣವಿರಾಮ ಕೊಡುತ್ತಿದ್ದರು.

ಅಂತಹ ರುಚಿಯಿದ್ದ ಮಾವನವರಿಂದ ಮೊಸರವಲಕ್ಕಿ ತಜ್ಞಳೆಂದು ಬಿರುದು ಪಡೆದ ನನಗೆ ಅವರ ಬಿರುದನ್ನು ಹೆಮ್ಮೆಯಿಂದ ಇಂದಿಗೂ ಹೇಳಿಕೊಳ್ಳಬೇಕೆನಿಸುತ್ತದೆ.

* *

ಕೈಯಲ್ಲಿದ್ದ ಮೊಸರವಲಕ್ಕಿ ತುತ್ತು ಬಾಯಿಗೆ ಮತ್ತೆ ಬಿತ್ತು. ಮನಸ್ಸಿನಲ್ಲಿ ತೆರೆ ಎದ್ದಿತ್ತು. ಹೊರಗೆ ಮತ್ತೆ ಗುಡುಗಿತ್ತು. ಮೋಡ ಕವಿದು ಕತ್ತಲು ಮನೆಯಲ್ಲೆಲ್ಲ ತುಂಬಿತು.



ಮಾವನವರು ಇಂದಿಲ್ಲ. ಆದರೆ ಮೊಸರವಲಕ್ಕಿ ಅವರ ಮಧುರಸ್ಮೃತಿ ತರುವ ದಿವ್ಯ ಖಾದ್ಯ.

ನಮ್ಮವರು ತಂದೆಯ ತಿಥಿಯ ದಿನ ರಾತ್ರಿ ಮೊಸರವಲಕ್ಕಿ ತಿನ್ನುತ್ತಾರೆ. ಆ ದಿನ ನಮ್ಮ ಮಗಳು ಮೊಸರವಲಕ್ಕಿ ಬೇಡವೆಂದಳು. ಮಗಳನ್ನು ಬಿಟ್ಟು ತಿನ್ನಲಾಗದೇ ಹೇಳಿದರು.

"ಮೊಸರವಲಕ್ಕಿ ತಿನ್ನು. ಅದು ಅಜ್ಜಾಗ ಭಾಳ ಪ್ರೀತಿ."

"ಯಾವ ಅಜ್ಜಾಗ?" ಮಗಳು ಪ್ರಶ್ನಿಸಿದಳು.

"ಇಬ್ಬರೂ ಅಜ್ಜಾಗ."

"ಯಾಕ ತಿನ್ನಬೇಕು?"

"ಅದು ಪ್ರಸಾದ."

ನಮ್ಮವರು ಆ ದಿನ ಆಡಿದಂತೆ ಮೊಸರವಲಕ್ಕಿ ನಮಗೊಂದು ಪ್ರಸಾದ, ಆ ಎರಡು ಅಂತಃಕರಣದ ಜೀವಗಳ ಮಧುರ ಸ್ಮೃತಿ ತರುವ ಪ್ರಸಾದ. ಹೊಟ್ಟೆ, ಬೆನ್ನು ನನ್ನೆದುರು ತಕ್ಕಡಿಯ ಎರಡು ಪರಡಿಗಳಾಗಿ ತೂಗಿದವು.

ತಂದೆಯವರು ತೀರಿಹೋಗಿದ್ದರು. ಮನೆ ಮನಸ್ಸು ಎಲ್ಲ ಭಣ ಭಣ. ನನ್ನ ನ್ನು ಭೆಟ್ಟಿಯಾಗಲೆಂದು ಬಂದ ಮಾವನವರು ಅಳುತ್ತಿದ್ದ ನನ್ನನ್ನು ಸಂತೈಸಿ ಹೇಳಿದರು, "ಅಳಬ್ಯಾಡವ್ವಾ ನಾ ಇದ್ದೀನಿ." ತಂದೆಯವರ ಅಂತಃಕರಣದ ಕೊರಕಲನ್ನು ತುಂಬಿದ್ದರು. ತಾವು ಸಾಯುವವರೆಗೆ ನನ್ನನ್ನು ತಂದೆಯಾಗಿ ಜೋಕೆಗೈದ ಅವರ ಮನಸ್ಸು ಸಾಗರದಷ್ಟು ವಿಶಾಲ ಅದರ ಆಳಕ್ಕೆ ಇಳಿದವ ಮುತ್ತನ್ನು ತಂದವನಿದ್ದ. ಚಿಪ್ಪನ್ನು ತಂದವನಿದ್ದ.

* *

ಗಣೇಶ ಚತುರ್ಥಿಯ ಹಿಂದಿನ ದಿನ ಮಾವನವರ ತಿಥಿ, ಮರುದಿನ ತಂದೆಯವರ ತಿಥಿ. ಗಣೇಶನ ಹಬ್ಬ ನಮ್ಮಿಬ್ಬರ ಉಬ್ಬ ಕಳೆದರೂ ಮೊಸರವಲಕ್ಕಿ ನಮಗೆ ಆ ದಿನಗಳಲ್ಲಿ ಪ್ರಸಾದ.

ನನ್ನ ಜೀವನದಲ್ಲಿ ಮೊಸರವಲಕ್ಕಿ ಪಾತ್ರ ಬಲು ಹಿರಿದು. ಆ ಹಿರಿ ಜೀವಗಳ ಮಧುರ ಸ್ಮೃತಿ, ತಾಯ ವಿಧವೆ ಸೋದರತ್ತೆಯರ ದುಃಖ, ಅಕ್ಕ ತಂಗಿಯರೊಟ್ಟಿಗೆ ಹಬ್ಬದ ದಿನ ಮೊಸರವಲಕ್ಕಿ ಕಲಸಿದಾಗ ಸಮನಾಗಿ ಹಂಚಿ ತಿನ್ನುವ ದಾಯಾದಿತ್ವ.

'ಸುಖದುಃಖೇ ಸಮೇಕೃತ್ವಾ' ಎಂಬ ಗೀತೆಯ ವಾಕ್ಯವನ್ನು ನೆನಪಿಗೆ ತರುವ ಸಾಂಕೇತಿಕ ಸಾಮಾನ್ಯ ಉಪಹಾರ ಮೊಸರವಲಕ್ಕಿ.

ಹೊಟ್ಟೆ ಬೆನ್ನು ಮತ್ತೆ ನನ್ನೆದುರು ತಕ್ಕಡಿಯ ಪರಡಿಗಳಾಗಿ ತೂಗಿದವು. ಹೆತ್ತ ಹೊಟ್ಟೆಯಿಂದ ಜಾರಿ ಬೆನ್ನ ಮೇಲೆ ಬಿದ್ದಾಗ ಹೊಟ್ಟೆಯಂತೆ ಪ್ರೀತಿಯಿಂದ ಆ ಭಾರ ಹೊತ್ತು ಪ್ರೀತಿ ಸುರಿಸಿದ ಮಾವನವರನ್ನು ಮೊಸರವಲಕ್ಕಿ ಕಲಸಿದಾಗೊಮ್ಮೆ ನೆನಸುತ್ತೇನೆ.

ಮಳೆ ತಡೆಗಟ್ಟಿ ಹಿಡಿದ ಮೋಡಗಳು ಚಲಿಸಿದವು. ಮಳೆ ಸುರಿಯಿತು. ಕಣ್ಣೀರು ಕೋಡಿಯಾಗಿ ಹರಿಯಿತು. ತಾಯಿ ಅಂದರು "ತ್ರಾಸು ಮಾಡಿಕೋ ಬ್ಯಾಡ ನಾನು ನಿಮ್ಮತ್ತಿ ಎಲ್ಲಾ ದುಃಖ ಮರತು ಮುಂದ ಹರಿಯೋ ನೀರಿನ ಪ್ರವಾಹದ ಜೋಡಿ ಈಸಿ ಹೊರಟೀವಿ."

ತಾಯಿ ಅತ್ತೆಯರು ಕಣ್ಣೆದುರು ದೃಢವಾಗಿ ನಿಂತರು. ಅವರು ಉರಿಯುತ್ತಿದ್ದಂತೆ ಕರಗುವ ಮೇಣದ ಗೊಂಬೆಯಲ್ಲ. ಕಲ್ಲಿನ ಪ್ರತಿಮೆ. ನೋವುಂಡು ಇನ್ನೂ ಕಲ್ಲಾಗಿದ್ದಾರೆ. ಕೈಯಲ್ಲಿದ್ದ ಮೊಸರವಲಕ್ಕಿ ಕಹಿಯೆನಿಸಿತ್ತು. ಆದರೆ ನಮ್ಮವರು ಆ ದಿನ ಆಡಿದ ಮಾತು ನೆನಪಾಯಿತು.. "ಮೊಸರವಲಕ್ಕಿ ತಿನ್ನಬೇಕು. ಅಜ್ಜಾಗ ಪ್ರೀತಿ, ಮೊಸರವಲಕ್ಕಿ ಪ್ರಸಾದ." ನನ್ನ ನೆನಪಿನ ಪುಟದಲ್ಲಿ ಅಚ್ಚಳಿಯದೇ ನಿಂತ ಮೊಸರವಲಕ್ಕಿ ಪ್ರಸಾದ.

* * *

**ಲೇಖಕಿಯ ಪರಿಚಯ :**

ಸುನಂದಾ ಬೆಳಗಾಂವಕರ ಹುಟ್ಟಿದ್ದು ಧಾರವಾಡದಲ್ಲಿ, ಇಂಗ್ಲಿಷ್ ಸಾಹಿತ್ಯದಲ್ಲಿ ಎಂ.ಎ. ಪದವಿ. ಪತಿ ಬಿಂದುರಾವ್ ಬೆಳಗಾಂವಕರ. ಬಹುತೇಕ ಜೀವನ ಬೇರೆಬೇರೆ ದೇಶಗಳಲ್ಲಿ ಕಳೆದಿದ್ದಾರೆ. ಸಹಜವಾಗಿಯೇ ತಾಯ್ನಾಡಿನ ತುಡಿತ. ಬರವಣಿಗೆಯ ಸೆಳೆತ. ಉತ್ತರ ಕರ್ನಾಟಕದ ಶೈಲಿ ಕರಗತ. ಕವಿ ರಾಮಚಂದ್ರಶರ್ಮಾ ಅವರ ಪ್ರೇರಣೆ ಒತ್ತಾಸೆಯೊಂದಿಗೆ ಸಾಹಿತ್ಯ ಕ್ಷೇತ್ರದಲ್ಲಿ ಗಮನಾರ್ಹ ಸಾಧನೆ.

'ಕಜ್ಜಾಯ' ಮೊದಲ ಪ್ರಬಂಧ ಸಂಕಲನ. 'ಮೃದ್ಗಂಧ'ದ ಕಥೆಗಳು, 'ನಾಸು' 'ಕಾಯಕ ಕೈಲಾಸ' ಮತ್ತು 'ಝುವಾದಿ' ಕಾದಂಬರಿಗಳು ಜನಪ್ರಿಯತೆ ತಂದುಕೊಟ್ಟವು. 'ಶಾಲ್ಮಲಿ' ಕವಿತಾ ಸಂಕಲನ. 'ಕೈತುತ್ತು' ಮತ್ತು 'ಕೊಡುವುದೇನು? ಕೊಂಬುದೇನು?' ವ್ಯಕ್ತಿಚಿತ್ರ-ಪ್ರಬಂಧಗಳು ಪ್ರಕಟವಾಗಿವೆ.



ಇವರ ಸಾಹಿತ್ಯ ಸೇವೆಗಾಗಿ ಶ್ರೀಮತಿ ರತ್ನಮ್ಮ ಹೆಗಡೆ ಪ್ರಶಸ್ತಿ, ವರ್ಧಮಾನ ಪೀಠ ಪ್ರಶಸ್ತಿ, ಅನುಪಮ ಪ್ರಶಸ್ತಿ, ಕರ್ನಾಟಕ ಸಾಹಿತ್ಯ ಅಕಾದೆಮಿ ಪ್ರಶಸ್ತಿ, ಶ್ರೀಮತಿ ಎಂ.ಕೆ. ಇಂದಿರಾ ಪ್ರಶಸ್ತಿಗಳು ಇವರಿಗೆ ಸಂದಿವೆ. ಪ್ರಸ್ತುತ ಪ್ರಬಂಧವನ್ನು ಸುನಂದಾ ಬೆಳಗಾಂವಕರ ಅವರ ಕಜ್ಜಾಯ ಕೃತಿಯಿಂದ ಆಯ್ದುಕೊಳ್ಳಲಾಗಿದೆ.

**ಪ್ರಬಂಧದ ಆಶಯ :**

ವಾಸ್ತವ ಜಗತ್ತಿನ ವಿದ್ಯಮಾನಗಳು ಮತ್ತು ಅದರೊಳಗಿನ ಮಾನವ ಸಂಬಂಧಗಳ ಪರಿವೀಕ್ಷಣೆಯೇ ಸುನಂದ ಬೆಳಗಾಂವಕರ ಅವರ ಬರವಣಿಗೆಯ ದನಿಯಾಗಿದೆ. ಲೇಖಕಿಯ ಈ ಅವಲೋಕನದಲ್ಲಿ ತ್ರಿಕಾಲಗಳ ಮುಖಾಮುಖಿ ಇದೆ. ಬಾಲ್ಯದ ನೆನಪಿನ ಬುತ್ತಿ ಅಗಾಧವಾಗಿದೆ. ಜೊತೆಗೆ ವರ್ತಮಾನದ ತುಡಿತಗಳೂ ತಳುಕು ಹಾಕಿಕೊಳ್ಳುತ್ತವೆ. ಭವಿಷ್ಯದ ಕನಸಿನ ಬಿಂಬಗಳೂ ಸೇರಿಕೊಳ್ಳುತ್ತವೆ. ಮೊಸರವಲಕ್ಕಿ ಪ್ರಬಂಧವು ಒಂದು ಕುಟುಂಬದ ಕಥನವನ್ನು ಮೊಸರವಲಕ್ಕಿ ನೆಪದಲ್ಲಿ ಬಡತನದ ನಾನಾಮುಖಗಳನ್ನು ಪರಿಚಯಿಸುತ್ತಾ ಸಾಗುತ್ತದೆ. ಜೀವನದ ಏರಿಳಿತಗಳ ಚಿತ್ರಣಗಳನ್ನು ನೀಡುತ್ತಾ ಅವಲಕ್ಕಿ ಬಡತನಕ್ಕೆ ಸಾಕ್ಷಿಯನ್ನು ಒದಗಿಸುತ್ತ ಸಂಬಂಧಗಳನ್ನು ಬೆಸೆಯುತ್ತದೆ. ಹಿರಿಯರನ್ನು ಗೌರವದಿಂದ ಕಾಣುವ ಪರಿ, ಹಿರಿಯರೊಬ್ಬರು ತಾವು ತಿಂದಿರುವ ಮೊಸರವಲಕ್ಕಿಯನ್ನು ಸ್ಮರಿಸುವ ಪರಿ ಅಗಾಧವಾದುದು. ಸಂಬಂಧಗಳು ನಾಟಕೀಯವಾಗುತ್ತಿರುವ ಇಂದಿನ ದಿನಗಳಲ್ಲಿ ಈ ಪ್ರಬಂಧವು ಆತ್ಮವಿಮರ್ಶೆ ಮಾಡಿಕೊಳ್ಳುವಂತೆ ಪ್ರೇರೇಪಿಸುತ್ತದೆ.

■■

# ೮. ಎರಡು ಕವಿತೆಗಳು

❖

## ೧. ಆತ್ಮಶೋಧನೆ – ವಿ.ಜಿ. ಭಟ್ಟ

ಹುಡುಕಿದೆ ಹಗಲೆಲ್ಲಾ
ಎಲ್ಲೂ ಸಿಗಲಿಲ್ಲ
ಹಳಬರು ಹೇಳಿದ ಆತ್ಮವು ನನಗೆ
ಎಲ್ಲೂ ಸಿಗಲಿಲ್ಲ

ಗುಡಿಯಲಿ ಬರಿ ಕಲ್ಲು
ವೇದ ಪುರಾಣದ ಪೀಠದ ಮೇಲೆ
ಬೆಳೆದಿದೆ ಒಣ ಹುಲ್ಲು

ಹುಡುಕಿದೆ ಮಗುವಿನ ಕಣ್ಣಿನಲಿ
ಮಸಣದ ಮಣ್ಣಿನಲಿ
ಸಿಗಲಿಲ್ಲ
ಪರಿಕಿಸಿದೆನು ಚೆಲುವಿನ ಕೆನ್ನೆ
ಒಳಗಡೆ ಬರಿ ಸೊನ್ನೆ

ಹಾರಿದೆ ಕಣ್ಣೀರಿನ ತಳಕೆ
ಕೇಸುರಿಗಳ ಜೋಲೆಯ ಝಳಕೆ
ಅಲ್ಲಿ
ಹೆಣವೂ ಸಿಗಲಿಲ್ಲ



ಆತ್ಮದ
ಕಣವೂ ಸಿಗಲಿಲ್ಲ

ಮತ್ತೆಲ್ಲೆಲ್ಲೋ ಹುಡುಕೇ ಹುಡುಕಿದೆ
ಆತ್ಮವು ಸಿಗಲಿಲ್ಲ
ಪುಣ್ಯಕೆ
ಹುಚ್ಚಲೆದಾಡುವ ನನ್ನನು ನೋಡಿ
ಯಾರೂ ನಗಲಿಲ್ಲ!

ಬಳಲುತ ಬರುತಿರಲಾ ಸಂಜೆ
ಯತಿಯೊಬ್ಬನ ಕಂಡೆ
ಆತ್ಮ ಶೋಧನೆ ಕತೆಯನು ಕೇಳಿ
ಯತಿ ಗಹಗಹಿಸಿದನು
ಹೇಳಿದ ಕೊನೆಗೆ
"ನಡೆ ಮನೆಗೆ–
ಕಾಣುವೆ ಆತ್ಮವ ಮನೆಯಲ್ಲೇ"
ಅನಿಸಿತು; ಅಲೆದಾಡುವೆ ಸುಳ್ಳೇ

ಮನೆಯಲಿ ಮಂಚದ ಮೇಲೊರಗಿ
ಆತ್ಮವ ಕಾಣದೆಯೇ ಕೊರಗಿ
ಏನೂ ತಿಳಿಯದೆ ಕುಳಿತಿರಲಾರೋ
ಕರೆದರು, ನೋಡಿದೆ ಹಿಂತಿರುಗಿ
ಯಾರೂ ಇದ್ದಿಲ್ಲ
ನನ್ನುಸಿರಿನ ಸದ್ದಿಲ್ಲ

ಆ ಕರೆ ಬಂತು
ತಡೆಯುವದೆಂತು?
ಕರೆಯನು ಹಿಂಬಾಲಿಸಿ ನಡೆದೆ
ದೊಡ್ಡ ಕಪಾಟಿನ ಬಳಿ ತಡೆದೆ

ಅದರೊಳಗಿಂದ
"ಬಾ ಬಾ ಕಂದ"

ಎಂದೆನ್ನಾರೋ ಕರೆಕರೆಯೆ
ಗುರುತಿಸಿ ಆ ಹೊತ್ತಿಗೆ ತೆರೆಯೆ
ಅದರೊಳಗಿಂದ
"ಇದೊ ಇದೊ ಕಂದ
ನಾನಿಹೆನಿಲ್ಲಿ
ಹುಡುಕುವೆ ನೀನೆಲ್ಲಿ?"

ಸಿಕ್ಕಿತು! ಸಿಕ್ಕಿತು!
ಆತ್ಮವು ನಕ್ಕಿತು
ಕಿಟ್ಟೆಲ ಕೋಶದ ನೂರಾ ಐವತ್
ಮೂರನೆ ಪುಟದಲ್ಲಿ
ಹರಿ ಓಂ ಹರ ಓಂ ಹರಿಹರ ಓಂ ಸತ್
ಆತ್ಮವು ಇನ್ನೆಲ್ಲಿ?
ಹಳಬರು ಹೇಳಿದ
ಆತ್ಮವು ಇನ್ನೆಲ್ಲಿ?

* * *



## ೨. ರಚನೆಯಿಂದ ವಿಸರ್ಜನೆಗೆ

ಗೊಮ್ಮಟನಂತಹ ಆಕೃತಿ ಕಟೆಯಲು
ಇಲ್ಲವು ಈತ ಸಮರ್ಥ
ಎಂಥ ಬಂಡೆಯೂ, ಹಾಲುಗಲ್‌ಗಳೂ
ಈತನ ರಚನೆಗೆ ವ್ಯರ್ಥ

ಚಿಣ್ಣರಿಗಾಗಿಯೆ ಮಣ್ಣಿನ ಗೊಂಬೆಯ
ಮೆತ್ತುತ ಆದ ಕೃತಾರ್ಥ
ಅವರ ಹಿಗ್ಗಿನದೆ ಹನುಮಾ ಗಣಪಾ
ರಾಮಾ ಸೀತಾ ಮೂರ್ತ

ಮೂರೇ ದಿನಗಳ ಗೆಲುವಿನಾಟದಲಿ
ಪುಡಿ ಪುಡಿ ಎಲ್ಲಾ ಗೊಂಬೆ
ನೀರಿನಲದ್ದುವ, ಗುದ್ದುವ, ತಿದ್ದುವ
ಮೇನಕೆ, ಊರ್ವಶಿ, ರಂಭೆ!

ಮೂರೇ ದಿನಗಳ ಗೊಂಬೆಯ ರಚನೆಗೆ
ನನ್ನದೇನೆ ಕೈ ಬೆರಳು
ಹದಾ ಒಣಗಿಸಲು ಎಡೇ ಅಂಗಳವು
ಸದಾ ಬೆಚ್ಚಗಿನ ನೆರಳು

ಮಕ್ಕಳ ಖುಷಿಗೂ ಇವನ ಸಂತಸಕು
ಇಲ್ಲೇ ಇಲ್ಲವು ತೆರಪು

ಆಡಿ ಕೆಡಿಸಲೂ, ತೀಡಿ ರಚಿಸಲೂ
ಅವರಿಗು ಇವಗೂ ಹುರುಪು

ಗೊಮ್ಮಟನಂತಹ ಆಕೃತಿ ಕಟೆಯಲು
ಇಲ್ಲವು ಈತ ಸಮರ್ಥ
ಚಿಣ್ಣರಾಡಲಿಕೆ ಮಣ್ಣಿನ ಗೊಂಬೆಯ ರಚಿಸಿಯೆ ಆದ ಕೃತಾರ್ಥ
ಪುನಃ ಪುನಃ ಈ ಸಂಭ್ರಮದಾಟವು
ಈತನ ಪಾಲಿಗೆ ಪರಮಾರ್ಥ

* * *

**ಕವಿ ಪರಿಚಯ :**

ಹೊಸಗನ್ನಡದ ಪ್ರಮುಖ ಕವಿಗಳಲ್ಲಿ ಅದರಲ್ಲೂ ನವೋದಯದ ಎರಡನೆಯ ತಲೆಮಾರಿನ ಪ್ರಮುಖ ಕವಿಗಳಲ್ಲಿ ವಿ.ಜಿ. ಭಟ್ಟ ಅವರು ಪ್ರಮುಖರು. ಉತ್ತರ ಕನ್ನಡ ಜಿಲ್ಲೆಯ ಹೊನ್ನಾವರ ತಾಲೂಕಿನ ಕಡೆತೋಕಾದಲ್ಲಿ ೧೯೨೩ರ ಡಿಸೆಂಬರ ೨ರಂದು ವಿ.ಜಿ. ಭಟ್ಟ ಜನಿಸಿದರು. ಇವರ ತಂದೆ ಭಡ್ತಿ ಗೋವಿಂದ ಭಟ್ಟ, ತಾಯಿ ಗಂಗೆ. ಅತ್ಯಂತ ಕಷ್ಟದ ಪರಿಸ್ಥಿತಿಯಲ್ಲಿ ಕೆಕ್ಕಾರು, ಹೊನ್ನಾವರ, ಜಮಖಂಡಿ, ಸಾಂಗ್ಲಿ, ಕೊಲ್ಲಾಪುರಗಳಲ್ಲಿ ಶಿಕ್ಷಣವನ್ನು ಪೂರೈಸಿದ ಭಟ್ಟರು, ಧಾರವಾಡ–ಮುಂಬೈಗಳಲ್ಲಿ ಖಾದಿ ಗ್ರಾಮೋದ್ಯೋಗದಲ್ಲಿ ಕಾರ್ಯನಿರ್ವಹಿಸಿದರು. ಅದರೊಂದಿಗೆ ಸಾಹಿತ್ಯದಲ್ಲಿ ವಿಶಿಷ್ಟ ಕೃಷಿ ಮಾಡಿದರು. ಕಾವ್ಯ, ಕಥೆ, ನಾಟಕ, ಹರಟೆ, ಹಾಸ್ಯ, ವಿಡಂಬನೆ, ಲಲಿತ ಪ್ರಬಂಧ, ಜೀವನಚರಿತ್ರೆ ಇವೇ ಮೊದಲಾದ ಸಾಹಿತ್ಯ ಪ್ರಕಾರಗಳಲ್ಲಿ ೩೦ಕ್ಕೂ ಹೆಚ್ಚು ಕೃತಿಗಳನ್ನು ರಚಿಸಿದ ವಿ.ಜಿ. ಭಟ್ಟರು ಕನ್ನಡ ಸಾಹಿತ್ಯದಲ್ಲಿ 'ವಿಡಂಬನ ಕವಿ'ಯೆಂದೇ ಖ್ಯಾತರಾಗಿದ್ದರು.

ಪಲಾಯನ, ರಕ್ತಾಂಜಲಿ, ಕಾವ್ಯವೇದನೆ, ಮೂರ್ತಿ, ಆತ್ಮಗೀತೆ, ಧ್ಯಾನಪೀಠ, ಮರಳಿ ಬಂದ ಕವಿತೆ, ಉತ್ಥಾನ, ಪ್ರಾರ್ಥನೆ ಮುಂತಾದವರು ವಿ.ಜಿ. ಭಟ್ಟರ ಕವನ ಸಂಕಲನಗಳು. ಸಹ್ಯಾದ್ರಿ, ಬುರುಕಿ, ಪೆದ್ದ ಕಥೆಗಳು ಇವರು ಭಟ್ಟರ ಜೀವನ ಚರಿತ್ರೆಗಳು. ಭಟ್ಟರ ಸಾಹಿತ್ಯ ಸಾಧನೆಗೆ ೧೯೮೨ರಲ್ಲಿ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಬಂದಿದೆ. ಈ ಎರಡು ಕವಿತೆಗಳನ್ನು ವಿ.ಜಿ. ಭಟ್ಟರ ಕಾವ್ಯವೇದನೆ ಕೃತಿಯಿಂದ ಆಯ್ದುಕೊಳ್ಳಲಾಗಿದೆ.



**ಕವಿತೆಗಳ ಆಶಯ :**

ನವಿರು ಹಾಸ್ಯ, ಮೊನಚಾದ ವಿಡಂಬನೆ, ವೈಚಾರಿಕತೆ ಮುಂತಾದವರು ವಿ.ಜಿ. ಭಟ್ಟರ ಕವಿತೆಯ ಪ್ರಮುಖ ಕಾಳಜಿಗಳು. ಅದರಲ್ಲೂ ದೇವರು, ಧರ್ಮದಂತಹ ಸೂಕ್ಷ್ಮ ಸಂಗತಿಗಳಲ್ಲಿ ಮೌಢ್ಯಗಳನ್ನು ತಿಳಿಹಾಸ್ಯದ ವಿಡಂಬನೆಯೊಂದಿಗೆ ಮನದಟ್ಟು ಮಾಡಿಸುವ ಅವರ ಶೈಲಿಯೇ ಸೋಜಿಗ. 'ಆತ್ಮ ಶೋಧನೆ'ಯು ಅಂತಹ ಒಂದು ಸೋಜಿಗದ ಹೊನಲು. ಆತ್ಮವನ್ನು ಹೊರಗೆ ಹುಡುಕದೆ ನಮ್ಮೊಳಗೇ ಕಂಡುಕೊಳ್ಳಬೇಕೆಂಬ ಆಧ್ಯಾತ್ಮಿಕ ಸಂಗತಿಯನ್ನು, ಕಿಟೆಲ್ ಕೋಶದ ೧೫೩ನೆಯ ಪುಟಕ್ಕೆ ತಂದು ನಿಲ್ಲಿಸಿ ಚಕಿತಗೊಳಿಸುತ್ತಾರೆ. ಅದೇ ರೀತಿ 'ರಚನೆಯಿಂದ ವಿಸರ್ಜನೆಗೆ'ಯಲ್ಲಿ ದೇವರನ್ನು ಮೂರ್ತಿರೂಪದಲ್ಲಿ ಕಾಣದೆ ಚೈತನ್ಯ ರೂಪದಲ್ಲಿ ಪರಿಭಾವಿಸಬೇಕು ಎಂಬ ಸಂಗತಿಯನ್ನು ತಮ್ಮದೇ ಪರಿಭಾಷೆಯಲ್ಲಿ ಹೇಳಿದ್ದಾರೆ.

■■

# ೯. ದೋಸೆ



ವಿ. ಸೀತಾರಾಮಯ್ಯ

ಊಟದ ಹೋಟೆಲೂ ಹೋಟೆಲೇ; ಕಾಫಿ ಹೋಟೆಲೂ ಹೋಟೆಲೇ. ಇಂದು ಈ ಎರಡನೆಯ ಜಾತಿಗೆ ಹಲವಾರು ಹೆಸರಿದೆ: Restaurant, ಆ ಭವನ, ಈ ಭವನ, ಕ್ಯಾಂಟೀನ್ ಕ್ಯಾಫೆ, ಲಂಚ್ ಹೋಂ, ಕೆಬಿನ್, ನಾನಾ ವಿಲಾಸಗಳು, ಮಂದಿರಗಳು–ಇನ್ನೂ ಎಷ್ಟೋ. ಅದೆಲ್ಲ ಹೊಸ ಕಾಲದ ಮಾತು. ಹಿಂದಿನ ಕಾಲದಲ್ಲಿ ಆ ಜಾತಿಗೆಲ್ಲ ಕಾಫೀ ಕ್ಲಬ್ಬೆಂದೋ, ದೋಸೆ ಅಂಗಡಿಯೆಂದೋ ಲೋಕರೂಢಿಯ ಹೆಸರು. ಜಾತಿವಾಚಕ ಅದು. ಯಾವ ವಿಲಾಸದ ಹೆಸರು ಹಾಕಿದರೂ ಸರಿಯೇ. ಟಿಫಿನ್ ರೂಂ ಎಂದರೂ ಅದೇ. ಇಂಗ್ಲಿಷಿನಲ್ಲಿ ಕಾಫೀ ಕ್ಲಬ್; ಕನ್ನಡದಲ್ಲಿ ದೋಸೆ ಅಂಗಡಿ. ಅಲ್ಲಿ ಕಾಫೀ ಜೊತೆಗೆ ಟೀ ಸಿಕ್ಕುತ್ತಿರಲಿಲ್ಲವೆಂದಲ್ಲ. ಕಾಫೀ ಟೀ ಮೈಗಾಗದವರಿಗೆ ಹಾಲೋ, ಕೋಕೊವೋ ದೊರಕುತ್ತಿರಲಿಲ್ಲವೆಂದೂ ಅಲ್ಲ. ದೊರಕುತ್ತಿದ್ದವು. ಅವನ್ನು ಕುಡಿಯುವವರ ಸಂಖ್ಯೆ ಕಡಮೆ. ಆದರೆ ಕಾಫಿ ಹೊಡೆತವೇ ಹೊಡೆತ. ಕಾಫೀ ಎಂದು ಹುಣಿಸೆಬಿತ್ತ ಹುರಿದು ಹುಡಿ ಮಾಡಿ, ಅದೆಂಥುದೇ ಆಗಲಿ, ಅದರಿಂದ ಮಾಡಿಕೊಡಲಿ ಆ ಅಂಗಡಿಗಳಿಗೆ ಹೋದವರು 'ಕಾಫೀ' ಕುಡಿದೇ ಬರುತ್ತಿದ್ದರು. ಕುಡಿಯಲು ಕಾಫೀ, ತಿನ್ನಲು ದೋಸೆ. ಬರಿಯ ದೋಸೆ ತಿಂದು ಹಿಂತಿರುಗುವ ಮನುಷ್ಯನಿಗೆ ಸಾಧಾರಣವಾಗಿ ಗೌರವ ಕಡಮೆ. ಈಗಿನಂತೆಯೇ ಆಗಲೂ. ಮನೆಯಲ್ಲಿ ಗತಿ ಇಲ್ಲದೆಯೋ ಮಾಡುವವರಿಲ್ಲದೆಯೋ ಅಥವಾ ಹಸಿದ ಬಿಕನಾಸಿಗಳು ಹೋಟೆಲಿಗೆ ಹೋಗಿ ಹಾಗೆ ಮಾಡಬಹುದೇ ಹೊರತು ಗೃಹಸ್ಥರು, ಮರ್ಯಾದಸ್ಥರು ಎಂದಿಗೂ ಹಾಗೆ ಮಾಡರು. ಮರ್ಯಾದೆ ಬೇಡವೇ, ಸುಮ್ಮನೆ ತಿಂದು ಬಂದರೆ ಏನು ಭಾಗ್ಯ? ನಾಯಿ ತಿನ್ನುತ್ತದೆ. ಒಂದೋ, ಎರಡೋ ಯಥಾಶಕ್ತಿ ದೋಸೆ ತಿನ್ನಬೇಕು. ಅದನ್ನು ಗಂಟಲಲ್ಲಿ ಸುಖವಾಗಿ ಸಾಗಕಳುಹಿಸಲು ಬಿಸಿಬಿಸಿಯಾಗಿ ಕಾಫೀ ಕೋಡಿ ಹರಿಸಬೇಕು.



ಹೇಗೂ ಕಾಫೀ ಕುಡಿದು ಬರುವುದೇ ನಾಗರಿಕ ವೃತ್ತಿ. ಕೈಯಲ್ಲಿ ಸಾಕಷ್ಟು ಕಾಸಿಲ್ಲವೇನು? ಖಾಲಿ ಕಾಫೀ ಕುಡಿದು ಹಿಂತಿರುಗಿ ಬನ್ನಿ. ಇದೇ ಸಂಪ್ರದಾಯ.

ಅದು ಹಾಗಿರಲಿ. ನಾನು ಈಗ ಆರಂಭಿಸಿದ್ದು ದೋಸೆಯ ವಿಷಯ ಬರೆಯಲು. ದೋಸೆ ಒಂದೇ ಅಲ್ಲ, ಹೋಟೆಲಲ್ಲಿ ಮಾಡುವುದು–ಇಡ್ಲಿ, ಉಪ್ಪಿಟ್ಟು ಅಥವಾ ಯಾವುದೋ ಸಿಹಿಯ, ಕಾರದ 'ಬಾತು', ಪೂರಿ ಇತ್ಯಾದಿ ಏನೇನೋ ಇರಬಹುದು. ಕಾಫೀ ಮಾರದ ಕಾಫೀ ಕ್ಲಬ್ ಹೇಗೆ ಇರಲಾರದೋ ದೋಸೆ ಇಲ್ಲದ ದೋಸೆ ಅಂಗಡಿಯೂ ಇರಲಾರದು. ಇಂದು ಟೀಗೆ ಕರೆದು– ಈ ಜನಕ್ಕೆ ಪ್ರಾಮಾಣಿಕತೆ ಬೇಡವೇ–ಟೀಯನ್ನೇ ಕೊಡದ ಉಪಚಾರಕೂಟಗಳು ನಡೆಯಬಲ್ಲವು. ಕಾಫೀ ಇಲ್ಲವೆನ್ನುವ ಕಾಫೀ ಕ್ಲಬ್ಬುಗಳು ಹಿಂದೆ ಇರಲಿಲ್ಲ. ಈಗ ಇಲ್ಲ. ನಾಳೆ ಇರಲಾರವು.

ಮೂರು ಬಗೆಗಳಿಗೆ ದೋಸೆಯೆಂದೇ ಸಾಮಾನ್ಯ ಹೆಸರು. ಸಾದಾ, ತುಪ್ಪ, ಮಸಾಲೆ. ಈ ಮೂರು ಬಗೆಯವೂ ದೋಸೆಗಳೇ. ಒಂದೇ ಪದಾರ್ಥದ ರೂಪಾಂತರಗಳು, ರುಚ್ಯಂತರಗಳು, ವಿಶೇಷಗಳು. ಅದರದರ ಗೌರವ ಅದಕ್ಕೆ ಸಲ್ಲುತ್ತದೆ. ಒಂದರ ಪ್ರಿಯರಿಗೆ ಇನ್ನೊಂದು ಕೆಲವೇಳೆ ಹಿಡಿಸದು. ಇದರಲ್ಲಿ ವೀರಪಂಥಗಳುಂಟು. ನನಗೆ ಜಗಳ ಇಷ್ಟವಿಲ್ಲ. ದೋಸೆ ಅಂಗಡಿಗಳು ಹುಟ್ಟಿದ ಕಾಲದಿಂದಲೂ ಈ ಮೂರು ವರ್ಗದವೂ ಹೆಸರಾದವೇ. ಆದರೂ ಸಾದಾ ಕಂಡರೆ ಅಂಗಡಿಯವನಿಗೆ ಅಷ್ಟು ಗೌರವವಿಲ್ಲ. ತನ್ನ ಪದಾರ್ಥದಲ್ಲಿಯೂ ಗೌರವವಿಲ್ಲ. ಅದನ್ನು ಬಯಸುವವನ ಮೇಲಿನ ವಿಶ್ವಾಸವೂ ಅಷ್ಟಕ್ಕಷ್ಟೇ. ಆದರೆ ತನ್ನ ಗಿರಾಕಿಗಳ ರುಚಿಯೂ, ಇಷ್ಟವೂ ಹಾಗಿದ್ದರೆ ಅಂಗಡಿಯವನು ಗಿರಾಕಿಗಳನ್ನು ಏಕೆ ಕಳೆದುಕೊಳ್ಳುತ್ತಾನೆ? ಇಷ್ಟವನ್ನು ಈಡೇರಿಸಬೇಕಾದುದು ಅವನ ಪ್ರಯೋಜನವಾದ್ದರಿಂದ ಅದಕ್ಕೆ ಪ್ರಯತ್ನಿಸುತ್ತಾನೆ. ಸಾದಾ ದೋಸೆಗೆ ಕೆಲಸ ಜಾಸ್ತಿ. ಖರ್ಚು ಹೆಚ್ಚು. ಸಂಪಾದನೆ ಕಡಮೆ. ಆದ್ದರಿಂದ ಅವನಿಗೆ ಅದರ ಮೇಲೆ ಪಕ್ಷಪಾತವುಂಟಾಗದು. ಇತ್ತ ಇವರಿಗೆ ಇದು ಅಗ್ಗ, ಆರೋಗ್ಯಕರವೆಂದು ಭ್ರಾಂತಿ ಬೇರೆ. ಇಂಥ ಎರಡು ಅನುಕೂಲಗಳುಳ್ಳ ಪದಾರ್ಥ ಸಹಜವಾಗಿ ಇವರಿಗೆ ಪ್ರಿಯ. ಒಂದೊಂದು ಸಮಯ ಒಂದು ಮಧ್ಯಸ್ಥವೃತ್ತಿ ಈ ಇಬ್ಬರ ನಡುವೆ ಅನುವಾಗುತ್ತದೆ. ಎರಡು ಮೂರಕ್ಕಿಂತ ಕಡಮೆ ಸಾದಾ ದೋಸೆ ಮಾರುವದಿಲ್ಲವೆಂದೋ ಗೊತ್ತಾದ ಒಂದು ಸೆಟ್ ದೋಸೆ ಕೊಳ್ಳಬೇಕೆಂದೋ ಕ್ರಮ ಏರ್ಪಡುವುದು. ಅಂಥ ಕಡೆ ಸೆಟ್ಟಿಗೆ ಎರಡು ಮೂರು ಆಣೆ ಹಾಕಿ ದೋಸೆಯ ಗಾತ್ರ ಚಿಕ್ಕದು ಮಾಡಿ, ಸಾದಾ ದೋಸೆಯ ಪ್ರಚಾರವಾಗುವುದು ಪದ್ಧತಿ.

ತುಪ್ಪದ ದೋಸೆಯ ವಿಷಯ ಹಾಗಲ್ಲ. ಸಾಮಾನ್ಯವಾಗಿ ಆ ಬಗೆಯದು ಒಂದೊಂದಕ್ಕೇ ವ್ಯಾಪಾರ. ಜೊತೆ, ಜೋಡಿ 'ತುಪ್ಪಾ' ಅಪರೂಪ. ತುಪ್ಪ ಯಾವುದನ್ನೋ ಹಾಕಿ ಗರಿಗರಿಯಾಗಿ, ಗರಗ್ಗಾಗಿ ಕಾವಲಿಯವನು ತೆಗೆದುಕೊಟ್ಟರೆ ಮಾಣಿಯೋ ಪೊಯ್ಯನೋ ನಿಮಗೆ ತಂದುಕೊಡುತ್ತಾನೆ. ಆ ನೋಟವೇ ಮೈಗೆ ಪುಳಕ ತರುವ ಪ್ರಸಂಗ. ಒಂದೊಂದು ಅಂಗಡಿಯ ರುಚಿ, ಗರಗು ಒಂದೊಂದು. ಚಟ್ನಿಯೋ, ಪಲ್ಯವೋ ಹಾಕಿಕೊಂಡು ಹತ್ತಿರ ಬಂದ ಅದನ್ನು ಕಂಡರೆ ಆಗುವ ಆನಂದ ಅತೀವ. ಅವನು ನಿಮಗೆ ತಿಳಿದವನಾಗಿ ಯಜಮಾನನಿಗೂ ನೀವು ಬೇಕಾದವರಾದರೆ ತುಪ್ಪವೋ ಚಟ್ನಿಯೋ ಗರಗೋ ಸ್ವಲ್ಪ ಸ್ಪೆಷಲ್ ಆಗುವುದು. ಸ್ಪೆಷಲ್ ಬೆಣ್ಣೆ, ಸ್ಪೆಷಲ್ ತುಪ್ಪ, ಈಚಿನ ಕಾಲದವು. ನಿಜ. ಆದರೆ ಆ ಹೆಸರುಗಳು ಬಳಕೆಗೆ ಬಾರದ ಬಹು ಮುಂಚೆಯೇ ಸ್ಪೆಷಲ್ ಸಪ್ಲೈ ಆಗುತ್ತಿದ್ದಿತು.

ಮೂರನೆಯ ಜಾತಿ ಮಸಾಲೆಯದು. ಅದರಲ್ಲಿ ಎರಡು ಪಂಗಡ; ಸ್ಪೆಷಲ್ ಭಾಗ ಬಿಟ್ಟು; ಒಂದು ಬೆಣ್ಣೆಯದು, ಇನ್ನೊಂದು ತುಪ್ಪದ್ದು. ದೋಸೆಗೆ ಯಾವ ಯಾವ ಮಸಾಲೆ ಮೇಲೆ ಬೀಳುವುದೋ–ಯಾವುದಾದರೂ ಬೀಳಲಿ–ದೋಸೆ ಹಾಕಿ ತಿಪ್ಪಿ, ತುಪ್ಪ, ಬೆಣ್ಣೆ, ಚಟ್ನಿ, ಪಲ್ಯ–ಸಾಗು ಹಾಕಿ ಇನ್ನಷ್ಟು ಬೆಣ್ಣೆಯನ್ನೋ ತುಪ್ಪವನ್ನೋ ಮೇಲೆ ಹುಯಿದು, ಕಾವಲಿಯ ಮೇಲೆ ಹದವಾದ ಕೂಡಲೆ ಸರಿಯಾಗಿ ಮಡಿಕೆ ಮಡಿಸಿ, ಮೊಗಚುವ ಕೈಯಿಂದ ಪ್ಲೇಟಿಗೋ, ಎಲೆಗೋ ಹಾಕಿ ನಿಮ್ಮ ಕೈಗೆ ತಂದುಕೊಟ್ಟರೆ ಕಾವಲಿಯ ಮೇಲೆ ಬಡಿದ ಮೊಗಚುವ ಕೈಯ ನಾದದಿಂದಲೇ ನೆಟ್ಟಗಾದ ಕಿವಿ ಹುರುಪುಗೊಳ್ಳುತ್ತದೆ. ಆ ಸ್ಥಿತಿ ದೃಶ್ಯ "ಸಲೆ ಸೊಗಸು". ಅದರ ಗಿರಾಕಿ ಕೈ ಹೊಸೆದುಕೊಳ್ಳುವುದು, ಸೀಟಿನಲ್ಲಿ ಅನುವಾಗಿ ಕುಳಿತುಕೊಳ್ಳುವುದು, ಷರಾಯಿ ಮಡಿಕೆ ಸರಿಮಾಡಿಕೊಂಡು ಅದನ್ನು ಗೌರವದಿಂದ ಎದುರುಗೊಳ್ಳುವುದು ಮುಂತಾದ ನೋಟ ಚೆನ್ನ. ಆ ದೋಸೆಯೇ ಆಗಲಿ ಕಾವಲಿಯ ಮೇಲೆ ಕೈ ಬಡಿದಾಗ, ಹಾಗೆ ಹೀಗೆ ಮೊಗಚಿ ಆಡಿಸಿದಾಗ ಹರಿದೀತೇ? ಚೂರಾದೀತೇ? ಕಾವಲಿಯಿಂದ ಕೈ ಎತ್ತುವಾಗ ಹವಣು ತಪ್ಪಿ ಕೆಳಗೆ ಬಿದ್ದೀತೆ? ಅನಾಮತ್ತು ಬಿಸಿಬಿಸಿಯಾಗಿ ಬರುವ ಅದು ಎದುರಿಗೆ ಸ್ಥಾಪಿತವಾದ ಕೂಡಲೆ ಅದರ ಮಡಿಕೆ ತೆರೆಯುವ ದೃಶ್ಯವೂ ಚೆನ್ನವೇ. ಮುಟ್ಟುವದಕ್ಕಾಗದಷ್ಟು ಬಿಸಿ. ಮುರಿಯ ಹೋಗಿ ಬೆರಳಿಗೆ ಬಿಸಿ ತಟ್ಟಿ ಒಂದು ಚೂರೂ ಈಚೆಗೆ ಬಾರದೆ ಬೆರಳು ಸುಟ್ಟ ಹದ ದೋಸೆಗೆ ನಿಜವಾದ ಶಿಫಾರಸು. ಆಯಿತು, ಇಷ್ಟು ಕಷ್ಟಪಟ್ಟು ಮಾಡಿದ, ತರಿಸಿದ ಆ ಪದಾರ್ಥವನ್ನು ಬಿಡುವುದಕ್ಕಾಗುತ್ತದೆಯೇ? ಹೆಬ್ಬೆರಳಿಂದ ಇತರ ಬೆರಳುಗಳನ್ನು ಸವರಿಕೊಳ್ಳುತ್ತ ತುಟಿಯುಸಿರೂದಿ ಬೆರಳಿಗೂ ದೋಸೆಗೂ



ಹಾಯೆನ್ನುವಂತೆ ಅವರು ಮುಂದಿನ ವ್ಯವಹಾರಕ್ಕೆ ಸಜ್ಜುಗೊಳ್ಳುವಾಗ ಕಾಣುವ ಆತುರ, ನಯನಮನೋಹರವಾದ್ದು. ತಮ್ಮ ದೋಸೆಗೆ ಕಾಯುತ್ತ ದೂರದಲ್ಲಿ ಕುಳಿತವರಿಗೆ ಮಾತ್ರ–ನಿಮಗೆ ದೃಷ್ಟಿ ತಾಕುವಷ್ಟು ಅಸೂಯೆ. ಒಂದು ಕ್ಷಣ ತಾಳಲಾರದೆ, ನೀವು ಹೋದ ಸ್ವಲ್ಪ ಹೊತ್ತಿನ ಮೇಲೆ ಬಂದವರು ಅವರು. ಅವರ ಆರ್ಡರೂ ರೆಜಿಸ್ಟರ್ ಆಗಿದೆ. ದೋಸೆಗೆ ಅವರ ಸರದಿಯೂ ಬರುವದು. ನೋಡಿ; ಬಂತು. ಅಷ್ಟರಲ್ಲಿ ಈ ಆತುರ, ಈ ಅಸೂಯೆ, ಈ ದೃಷ್ಟಿಪಾತ ಏಕೊ.

ಅಂತೂ ಏನೇ ಹೇಳಿ, ನಿಮ್ಮ ಮೆಚ್ಚಿನ ಹೋಟೆಲಿಗೆ ಹೋಗಿ ದೋಸೆ ತಿನ್ನುವ ಸಂಭ್ರಮ ನಿಜವಾಗಿ ಸಂಭ್ರಮವೇ. ಸ್ವಲ್ಪ ಆರಿದರೆ ಆ ಅಧ್ವಾನ್ನವನ್ನು ಮುಟ್ಟಲಾಗದು. ನಾಲಿಗೆಗೆ ರುಚಿಸದು. ತಂಗಳು, ಆರಿದ್ದು ತಿನ್ನುವುದಕ್ಕೇ ಹೋಟೆಲಿಗೆ ಹೋಗುವುದು? ಬಿಸಿಯ ಹದದಲ್ಲಿ ಅದನ್ನು ತಿನ್ನುವ ಸಂತೋಷ ವಾಸ್ತವವಾದದ್ದು. ಈ ಪ್ರಕರಣದಲ್ಲಿ ನನಗೆ ದೋಸೆಯ ಹಿರಿಮೆಗೆ ಇನ್ನೊಂದು ದೊಡ್ಡ ಕಾರಣ ತೋರಿದೆ. ಹೇಳದಿದ್ದರೆ ಮನಸ್ಸಿಗೆ ನ್ಯೂನತೆ ತೋರುತ್ತದೆ. ಉಳಿದ ಎಲ್ಲವನ್ನೂ ಹತ್ತು ಜನರಿಗಾಗಿ ಒಟ್ಟಿಗೆ ಮಾಡುತ್ತಾರೆ. ನಿಮಗಾಗಿಯೇ, ಪ್ರತ್ಯೇಕವಾಗಿ ಮಾಡುವುದಿಲ್ಲ. ಹತ್ತು ಜನಕ್ಕೆ ಮಾಡಿದ್ದುದರಲ್ಲಿ ನಿಮಗೂ ಭಾಗ; ಹತ್ತರಲ್ಲಿ ನೀವು ಹನ್ನೊಂದು. ದೋಸೆ ಹಾಗಲ್ಲ. ನೀವು ಹೇಳಿದಂತೆ ನಿಮಗೇ ಪ್ರತ್ಯೇಕವಾಗಿ ಅದನ್ನು ಮಾಡಿಕೊಡುತ್ತಾರೆ. ಎರಡು ವ್ಯಕ್ತಿತ್ವಗಳಿಗೆ ಬೆಲೆ ಇಲ್ಲಿ. ದೋಸೆಗೆ, ನಿಮಗೆ. ಈ ವಿಶೇಷ ಅದರ ಸ್ವರೂಪ ಲಕ್ಷಣ. ಸ್ವತಂತ್ರವಾಗಿ ಹುಟ್ಟಿದ ನಮಗೆ ಅಂಥದೇ ಒಂದು ಗುಣದ ಆಕರ್ಷಣೆ ಹೋಗುತ್ತದೆಯೇ? ನಿಮಗೆ ಹೇಗೆ ತೋರುವುದೋ ಕಾಣೆ. ನನ್ನ ಮನಸ್ಸಿಗೆ ಈ ವಿಶೇಷತೆ ಬಹು ಮೆಚ್ಚು. ದೋಸೆಯನ್ನು ಆಧುನಿಕ ಸತ್ವವನ್ನಾಗಿರಿಸಿರುವ ಲಕ್ಷಣ ಅದು. ಇನ್ನೂ ಒಂದು ಸಂಗತಿ: ಏಕೋ ಏನೋ, ಎಷ್ಟು ಚೆನ್ನಾಗಿ ಮಾಡಿದರೂ ಮನೆಯಲ್ಲಿ ಮಾಡಿದ ದೋಸೆ ಹೋಟೆಲದರ ರುಚಿಯ ಸಮಕ್ಕೆ ಬರುವುದಿಲ್ಲ. ಮನೆಯ ಹೆಂಡತಿಯೇ ಹೀಗೆ ಹೇಳುತ್ತಾಳೆ. ಉತ್ತಮವಾಗಿ ತಾನು ಅಟ್ಟ ದೋಸೆಗಿಂತ ಹೋಟೆಲ್ ದೋಸೆಯು ಆಕೆಗೂ ಹೆಚ್ಚು ರುಚಿಯೆಂದು ಆಕೆಯ ಬಾಯಿಂದಲೇ ಪದೇ ಪದೇ ಕೇಳುತ್ತೇವೆ. ಹೆಂಗಸು ತನ್ನ ಗುಣಕ್ಕೆ ಅಪೇಕ್ಷೆ ಕಡಮೆ ಮಾಡಿಕೊಂಡು ಇನ್ನೊಂದನ್ನು ಹೊಗಳುವ ಈ ಮನೋವೃತ್ತಿಯನ್ನು ಕಂಡರೆ ಆ ಪದಾರ್ಥದ ಗುಣ ನಿಜವಾಗಿ ವಿಶಿಷ್ಟವಾದ್ದಿರಬೇಕು. ಹೇಗೂ ಆಗಲಿ, ಪ್ರಕಾಂಡವಾದ ಆ ಕಾವಲಿಯ ಪ್ರಭಾವವೋ, ಅದರ ಮೇಲೆ ಬಳಿಯುವ ಆ ತೈಲತುಪ್ಪದ ಭಾಗ್ಯವೋ, ಅದನ್ನು ಬಳಿಯುವ ಆ ಬಟ್ಟೆಯ ಕೂರ್ಚದ ಭಾಗ್ಯವೋ, ಆ ಎಲ್ಲದರ ಸಮ್ಮಿಳಿತ ಸೌಭಾಗ್ಯವೋ, ಅಂತೂ ಅದರ ಸಮಕ್ಕೆ ಇನ್ನೊಂದು ರುಚಿ ಬಾರದು.

ನಾನು ಕೆಲವರನ್ನು ಕಂಡಿದ್ದೇನೆ: ಒಬ್ಬರು, ಇಬ್ಬರು ಅತಿಯೆಂದರೆ ಮೂವರು–ಸಂಖ್ಯೆ ಅದಕ್ಕಿಂತ ಹೆಚ್ಚಾದರೆ ಸಂಗ ಗುಂಪಾಗುತ್ತದೆ, ಗುಂಪು ಗೊಂದಲವಾಗುತ್ತದೆ, ಸಂಗ ಒಡೆಯುತ್ತದೆ, ಸಂಗದ ಅಖಂಡತೆಗೆ ಚ್ಯುತಿ ಬರುತ್ತದೆ–ದಿನಾ ಒಂದು ಕಡೆ ಸೇರಿ ಯಾವುದೋ ಒಂದು ಗೊತ್ತಾದ ಕಡೆ ಒಂದು ಮುದ್ದೆ ಬೆಣ್ಣೆಯನ್ನು ಕೊಂಡು, ತಮ್ಮ ಪ್ರೀತಿಯ ದೋಸೆಯಂಗಡಿಗೆ ತೆರಳಿ, ಖಂಡಿತವಾಗಿ ಬಾಯಿ ತುಂಬ ನುಡಿದು ತಮಗೆ ತೆರೆಯುವ ಸ್ವಾಗತದೊಡನೆ ಒಳಗೆ ಹೋಗಿ ಕುಳಿತು ಅವನು ಹಾಕುವಷ್ಟು, ಇವರು ಕೇಳುವಷ್ಟು ದೋಸೆಗಳನ್ನು ಹಾಕಿಸಿಕೊಂಡು, ಸಂಗ್ರಹಿಸಿ ತಂದ ನವನೀತವನ್ನು ಹಂಚಿಕೊಂಡು, ಅವನ್ನು ಸವಿದು ತೃಪ್ತರಾಗಿ, ತೃಪ್ತಿಯ ಸನ್ನಾದಗಳಿಂದ ವಿಜೃಂಭಿಸುತ್ತ ಅಲ್ಲಿಂದ ಬೇರೆ ಇನ್ನೊಂದು ಅಂಗಡಿಗೆ ಹೋಗಿ ಅಲ್ಲಿ ಸಾಕಷ್ಟು ಕಾಫೀ ಕುಡಿದು ತಮ್ಮ ತಮ್ಮ ಮನೆಗಳಿಗೋ, ಕೆಲಸಗಳಿಗೋ, ಕಸರತ್ತಿಗೋ ನೆಮ್ಮದಿಯಾಗಿ ಹೋಗುತ್ತಿದ್ದ ಹಿಂದಿನ ಕಾಲದ ಒಂದು ಚಿತ್ರ ನನ್ನ ಕಣ್ಣಿಗೆ ಕಟ್ಟಿದಂತಿದೆ. ಇಂಥ ದೃಶ್ಯ ಗದ್ದಲದ, ಅವಸರದ ಈ ಕಾಲದಲ್ಲಿ ಕಡಮೆಯಾಗುತ್ತಿದೆ. ಅಥವಾ ಜನ ಹೆಚ್ಚಾದ್ದರಿಂದ ಕಣ್ಣಿಗೆ ಬೀಳುತ್ತಿಲ್ಲವೋ. ದೋಸೆ ಮಾಡುವವನಿಗೂ ಗಿರಾಕಿಗೂ ನಿಕಟತೆ, ಆಪ್ತತೆ ಪೂರ್ತಿ ಮಾಯವಾಗುತ್ತಿದೆ. ಈ ಸಂಗತಿ ಜನರು ಸತ್ವಹೀನರಾಗಿ, ರುಚಿ ಹೀನರಾಗಿ ಆಗುತ್ತಿರುವುದಕ್ಕೆ ಸಾಕ್ಷಿಯಿಲ್ಲವೆನ್ನುತ್ತೀರ? ಏನೋ ಅವಸರ; ಯಾವುದರಲ್ಲಿಯೂ ಅತೃಪ್ತಿ. ಯಾವುದಕ್ಕೂ ಅವಧಾನವಿಲ್ಲ. ಒಂದೇ ಮನಸ್ಸಿನಿಂದ ಪರಿಷ್ಕಾರವಾಗಿ ದೋಸೆ ತಿನ್ನುವ ಪ್ರವೃತ್ತಿಯೂ ಕಾಣೆಯಾಗುತ್ತಿದೆ. ಈ ಕಾಲದ ರಂಗು ಚುಂಗು ಈಗ್ಗೆ ಬೇರೆ ಇದೆಯಾದರೂ ತುಂಬು ಮನಸ್ಸಿನಿಂದ ಇಷ್ಟವಾದದ್ದನ್ನು ಸವಿಯುವ ಹುಮ್ಮಸ್ಸೂ, ಹರ್ಷವೂ ಎಲ್ಲಿ ಪೂರ್ತಿ ಹೋಗಿಬಿಡುವುದೋ ಎಂಬ ಶಂಕೆ ನನಗೆ.

ಬೆಂಗಳೂರು ನಿವಾಸಿಗಳಿಗೆ ಎಷ್ಟು ದೋಸೆ ಅಂಗಡಿಗಳು ಪರಿಚಿತವಲ್ಲ! ಎಲ್ಲರಿಗೂ ಎಂದಲ್ಲ. ವಿಶ್ವಾಸವಿರುವವರಿಗೆ. ಉಳಿದವರ ಮಾತು, ವಿಮುಖರ ಮಾತು ಬೇಡ. ನಾವು ಸಕ್ತರು. ಎಷ್ಟು ಬಗೆಯ ದೋಸೆಗಳು! ಕಾಳಮ್ಮನ ಗುಡಿ ಬೀದಿಯ ಎಡ್ವರ್ಡ್ ದೋಸೆ, ಪಬ್ಲಿಕ್ ಲೈಬ್ರರಿಯ ಹನುಮಂತರಾಯರ ದೋಸೆ, ಬಳೆಪೇಟೆಯ ನಾರಣಪ್ಪನವರ ರಬ್ಬರ್ ಟ್ಯೈರ್ ದೋಸೆ, ಉಡುಪಿ ಹೋಟೆಲಿನ ಒಂದೂ ಕಾಲಾಣೆಯ ಮಸಾಲೆ ದೋಸೆ, ಕಂಚೀ ವಿಳಾಸದ ರಮಢೋಲ್ ದೋಸೆ, ಐಯಂಗಾರ್ ದೋಸೆ–ಪ್ರಖ್ಯಾತವಾದ ಭಕ್ಷ್ಯಗಳು. ಗುಣ ಪಕ್ಷಪಾತಿಗಳೆಲ್ಲರಿಗೂ ಈ ಬಗೆಗಳು ಪರಿಚಿತ. ಇತರ ನೂರಾರು ಅಂಕಿತಗಳು ವಿಶಿಷ್ಟ ಜಾತಿಯವಾದ್ದರಿಂದ ಬಹುಶಃ ಅವು ಸರ್ವಮಾನ್ಯವಲ್ಲ.



ಒಂದೊಂದರ ರುಚಿಯೂ ಒಂದೊಂದು ಕೀರ್ತನೆಗೆ ತಕ್ಕ ಪದಾರ್ಥ. ಎಲ್ಲೆಲ್ಲಿಯ ಪದಾರ್ಥವೂ ಒಂದೇ ರೀತಿ, ಒಂದೇ ರುಚಿಯದಾಗುತ್ತಿರುವ ಕಾಲದಲ್ಲಿಯೂ ದೋಸೆ ದೋಸೆಯೇ ಆದ್ದರಿಂದ ಅಪರೂಪವಾಗಿ ಆಯಾ ಅಂಗಡಿಯ ಕೈವಾಡ ಅದಕ್ಕೆ ಉಳಿಯುತ್ತಿದೆ. ಆಕಾರ, ಗಾತ್ರ, ರುಚಿ, ಹದ, ಪರಿಮಳಗಳಲ್ಲಿ ವಿಶಿಷ್ಟತೆ ಇನ್ನೂ ತಕ್ಕಮಟ್ಟಿಗೆ ರೂಢಿಸಿದೆ. ಮನೆಯನ್ನು ಮಾರಿಯಾದರೂ ದೋಸೆ ತಿನ್ನುವವರಿರುವವರೆಗೂ ಎರಡು ರೂಪಾಯಿಗೆ ಒಂದು ಸೇರು ಅಕ್ಕಿ, ಮೂರಕ್ಕೆ ಒಂದು ಸೇರು ಉದ್ದಿನಬೇಳೆ ಆದಾಗಲೂ ಉಳಿದೀತೆಂಬ ಭರವಸೆ ನನಗಿದೆ.

ಈಚೆಗೆ, ಸುಮಾರು ೧೯೧೫ರಲ್ಲಿ, ಬೊಂಬಾಯಿ ಆನಂದ ಭವನದವರು ಅಂಗಡಿಯಿಟ್ಟಾಗಿನಿಂದ ಅಗಲವಾದ ವಿಜಾತೀಯವಾದ ಒಂದು ಬಗೆಯ ರವೆ ದೋಸೆ ಒಂದು ಪದಾರ್ಥವಾಯಿತಾದರೂ ದೋಸೆಯೆಂದರೆ ಎಂದಿಗೂ ಅಕ್ಕಿಯದೇ ದೋಸೆ. ಹುದುಗು ಇನ್ನಾವುದೇ ಬೀಳಲಿ ಹದಿನಾರಾಣೆ ಹುದುಗೆಂದರೆ ಉದ್ದಿನದೇ ಹುದುಗು. ಸಾಚಾ ಸಾಮಾನಿಗೆ ಬೆರಕೆ ಸೇರದು. ಮೈದಾ ಬೆರೆಸಲಿ, ಗೋಧಿ ಹಿಟ್ಟು ಬೆರೆಸಲಿ ಅಕ್ಕಿಯದೇ–ಹಸಿ ಅಕ್ಕಿ ಮನೆಯಲ್ಲಿ, ಕುದುಪಲಕ್ಕಿ ಹೋಟೆಲಲ್ಲಿ–ಮೂಲಧಾತು. ಹಿಟ್ಟನ್ನು ಬೆರೆಸುವ ಘೋಟಾವಣೆ ತಂತ್ರ ನಮಗೊಪ್ಪದು. ದೋಸೆಯ ಹಿಟ್ಟನ್ನು ರುಬ್ಬಿಯೇ ಮಾಡಬೇಕು. ಯಂತ್ರದಲ್ಲಲ್ಲ, ನಾಡೊರಳಲ್ಲಿ; ತಿರುವುಗುಂಡಿನಲ್ಲಿ. ಹಾಗೆ ರುಬ್ಬುವುದರ ವೃತ್ತಿಯಲ್ಲಿಯೂ ಆಯ್ಕೆಯಲ್ಲಿಯೂ ಯಜಮಾನರು ಹೆಚ್ಚಿನ ಹುಷಾರನ್ನು ವರುಣಶಕ್ತಿಯನ್ನು ಬಳಸಬೇಕಾಗುತ್ತದೆ. ಹಿಂದಿನ ಕಾಲದಲ್ಲಿ ದೋಸೆ ತಿನ್ನಲು ಹಣವಿಲ್ಲದೆ. ಅದರ ಗೀಳಿರುವವರು ನಾಲ್ಕೊಬ್ಬೆ ಹಿಟ್ಟು ರುಬ್ಬಿಕೊಟ್ಟು ನಾಲ್ಕು ದೋಸೆ ತಿಂದು ಹೋಗುತ್ತಿದ್ದುದುಂಟು. ರುಬ್ಬುವ ವೈಖರಿಯ ಹಿನ್ನೆಲೆ, ಅದರ ಪರಿಣಾಮಕಾರಿ ಹುದುಗು ಹದವಾಗಿ ಸೇರುವ ಬನಿ–ಹಿಟ್ಟಿಗೆ ಬಾರದಾದರೆ ದೋಸೆ ಮಾಡಿದರೂ ಒಂದೇ ಮಾಡದಿದ್ದರೂ ಒಂದೇ.

ದೋಸೆಯ ಅಂಗಡಿಯ ವಿಷಯದಲ್ಲಿ ಇಷ್ಟು ವರ್ಣನೆ ಮಾಡಿದವರನ್ನು ಕುರಿತು ಇಂಥವನಿಗೆ ಮನೆ ಇರಬಾರದು, ಇವನು ಯಾವನೋ ಗುಂಡುಗೋವಿ ಎಂದುಕೊಳ್ಳಬೇಡಿ. ನಾನು ಗುಂಡೂ ಹೌದು; ನಿಮ್ಮರ್ಥದಲ್ಲಲ್ಲವಾದರೂ ಕೋವಿಯೂ ಹೌದು. ದೋಸೆಯ ಪೂರ್ವ ಸ್ಥಿತಿಯ ಮೂಲಸ್ಥಿತಿಯ ಮೂಲಸಾಧನ ಗುಂಡು; ಕೋವಿ ನಾನು; ಗುರಿ ಇಟ್ಟರೆ ಕೋವಿಯಿಂದ ಇಟ್ಟಂತೆ ಲಕ್ಷ್ಯಭೇದನವಾಗುವುದಾದ್ದರಿಂದ ಎದುರು ಮಾತು ಉರಿದುಬೀಳಬೇಕು. ಎರಡು

ಸಂಸಾರದ ಸುಖ ಕಂಡವನಿಗೆ ಈ ಬಗ್ಗೆ ಹೆಚ್ಚಿನ ಭಾಗ್ಯ ಸಂಪಾದನೆಯಾಗಿದೆ. ಎರಡು ಜೊತೆ ಕೈಬಳೆಗಳ ಗುಲುಕಿನಲ್ಲಿ ಪಕ್ವವಾದ ರುಚಿ, ಅನುಭವ ಪಡೆದದ್ದರಿಂದಲೇ ನನಗೆ ವೈವಿಧ್ಯದಲ್ಲಿ ಅಸಹನೆಯಿಲ್ಲ. ಕಾಲೇಜಿನ ಗುರುಗಳೊಬ್ಬರು ಹಿಂದೆ ಯಾರಿಗೋ ಹೇಳಿದರಂತೆ, ನೀವೇಕೆ ಮದುವೆ ಮಾಡಿಕೊಳ್ಳಲಿಲ್ಲ ಎಂದುದಕ್ಕೆ ಉತ್ತರವಾಗಿ, ಅವರು, ಬಂದಾ ರೂಪಾಯಿಗಿಂತ ನನಗೆ ಹದಿನಾರಾಣೆ ಚಿಲ್ಲರೆ ಹೆಚ್ಚು ಪ್ರಿಯ– "I prefer sixteen annas change to a Rupee" ಎಂದರಂತೆ. ಚಿಲ್ಲರೆಯ ಬೆಲೆಯನ್ನು ನೀವು ಹೇಗೇ ಕಟ್ಟಿ; ಅವರಾಡಿದ ಇಂಗ್ಲಿಷ್ ಮಾತಿನಲ್ಲಿ ಚೇಂಜ್ (change) ಎಂಬ ಮಾತಿದೆ; ಬೇಸರ ನಿವಾರಣದ ವಿವಿಧತೆಯ ಸೂಚಿಕೆಯಾಗಿ. ಚಿಲ್ಲರೆಯ ಗೌರವ ಚಿಲ್ಲರೆಗಿದೆಯಾದರೂ ಚೇಂಜ್–ಕ್ಲಿಯೋಪಾತ್ರಾ ರಾಣಿಯ–ರಂಗು ರಂಜನೆ ಅದಕ್ಕಿಲ್ಲ. ಎಲ್ಲದರಲ್ಲಿಯೂ ಎಲ್ಲ ಗುಣವನ್ನೂ ಅರಸುವುದೂ ನಿರೀಕ್ಷಿಸುವುದೂ ಸಾಧುವಲ್ಲವೆಂಬುದು ಮನಸ್ಸಿಗೆ ಸ್ವಲ್ಪ ಸಮಾಧಾನ ತರುತ್ತಿದೆ.

ದೋಸೆಯನ್ನು ಮಾಡಲು ಬಾರದ ಹೆಣ್ಣು ಕೈ ಯಾವ ಸಂಸಾರಕ್ಕೆ ಬರುತ್ತದೆ? ಈ ಕಾಲದ ನಿಮಗೆಲ್ಲ ಆ ಪುಣ್ಯವಿದೆಯೋ ಇಲ್ಲವೋ ಕಾಣೆನೆ ಹೊರತು ನಮ್ಮ ಕಾಲದವರಿಗೆ ಅದು ಬಿ.ಎ., ಎಂ.ಎಸ್ಸಿ.,ಗಳಿಗಿಂತ ದೊಡ್ಡ ಯೋಗ್ಯತೆ; ಹೆಚ್ಚು ಗಣ್ಯವಾದ ಉಪಾಧಿ. ಮೊದಲು ನಾವು ಹೆಣ್ಣಿನ ವಿಚಾರ ಮಾಡುವಾಗ ಸೀಗೆಪುಡಿ, ಮೆಣಸಿನಪುಡಿ ಮಾಡಬಲ್ಲರೆ? ದೋಸೆಗೆ ರುಬ್ಬುವ ಅಭ್ಯಾಸ, ಭತ್ತ ಅವಲಕ್ಕಿ ಕುಟ್ಟುವ, ಹಿಟ್ಟು ಬೀಸುವ ಅಭ್ಯಾಸ ಇವೆಯೆ? ಹುಳು ಬೀಳದಂತಹ ಉಪ್ಪಿನಕಾಯಿ ಹಾಕಬಲ್ಲರೆ? ಹಪ್ಪಳ, ಸಂಡಿಗೆ, ಶಾವಿಗೆ ಮುಂತಾದುವನ್ನು ಮಾಡಬಲ್ಲರೆ? ನಾಲ್ಕು ಸೇರಕ್ಕಿ ತಪ್ಪಲೆ ಇಳಿಸಬಲ್ಲರೆ? ಬಟ್ಟೆ ಒಗೆಯಬಲ್ಲರೆ? ಅಭ್ಯಂಜನ ಮಾಡಿಸಬಲ್ಲರೆ? ದೊಡ್ಡ ಅಡಿಗೆಮಾಡಿ ಬಡಿಸಿ ತಾವು ಕೆಲವು ಘಂಟೆಗಳು ಹೆಚ್ಚಾಗಿ ಉಪವಾಸ ತಡೆಯಬಲ್ಲರೆ? ಎಂದು ಮುಂತಾಗಿ ಪರೀಕ್ಷೆ ನಡೆಸಿದ ಮೇಲೆಯೇ ಮದುವೆಯಾಗುತ್ತಿದ್ದದ್ದು. ನಮ್ಮ ಕಾಲದವರೆಲ್ಲರಿಗೂ ಆ ತರಪೇತು ಇರುತ್ತಿತ್ತು. ಮೊದಲಿಂದ ಹಿಡಿದು ಕಡೆಯವರೆಗೂ ಅವರೇ ಎಲ್ಲ ಮಜಲಿನಲ್ಲಿಯೂ ಆ ಸಂಸ್ಕಾರದಲ್ಲಿ ಪಾರಾಂಯಣರಾಗಿರುತ್ತಿದ್ದವರು, ಪರೀಕ್ಷೆಗಳಲ್ಲಿ ಉತ್ತೀರ್ಣರಾಗುತ್ತಿದ್ದವರು. ಅಜ್ಜಿಯೊ, ತಾಯೋ ಮಾಡುವುದನ್ನೂ ನೋಡಿ ಶಾಸ್ತ್ರ ಲಕ್ಷಣಗಳನ್ನು ಕಲಿತ ಗಂಡಿಗೆ ಅದರ ಆಗಮ, ರುಚಿ, ವಿಮರ್ಶನ, ಹದ ಎಲ್ಲ ಗೊತ್ತು. ಮಾಡಲು ಕಲಿತ ಹೆಣ್ಣಿಗೆ ಅದರ ಸಂಭಾರ, ಸಾಧನೆ, ರೂಪಣ, ಬಡಿಸೋಣ ಗೊತ್ತು. ಕಾವಲಿ, ಕಾವು, ಹುಯ್ಯಿ, ಪಾಕ ಗೊತ್ತು. ಒಂದೇ ಸಮವಾಗಿ



ಹಿಟ್ಟು ಕಲಸಿಕೊಂಡು ಗಂಟಿಲ್ಲದೆ, ಕಲ್ಲು, ಕರಟ, ಇದ್ದಿಲುಪುಡಿ ಸೇರದೆ, ಒಂದೊಂದಕ್ಕೆ ಎಷ್ಟು ಬೇಕೋ ಅಷ್ಟಷ್ಟನ್ನೇ ಅಳತೆಯ ಸೌಟಿನಲ್ಲಿ ಕಾವಲಿಗೆ ಹಾಕಿ ಬರೆದು, ವಿಷ್ಣುಚಕ್ರದ, ಸೂರ್ಯಚಂದ್ರರ ವರ್ತುಲತೆಯನ್ನು ಧಿಕ್ಕರಿಸುವಂತೆ ತೆಳ್ಳಗೋ ದಪ್ಪಕ್ಕೋ ನಿಮ್ಮಿಷ್ಟವನ್ನು ಅನುಸರಿಸಿ ದೋಸೆ ಹುಯಿದು, ಘೃತವೆಂದರೆ ಘೃತವನ್ನೇ ಎರೆದು, ತಿರುವಿ ಹಾಕಿ, ತಿರುಗಿ ಘೃತವೆರೆದು ಎಳಗೆಂಪಗೆ ಅದನ್ನು ಬೇಯಿಸಿ, ಒಂದೆರಡು ಒಳ್ಳೆಯ ಮಾತಾಡಿ ನಿಮಗೆ, ತಮ್ಮನಿಗೆ, ಮಕ್ಕಳಿಗೆ ಆಕೆ ಕೊಡುವಾಗ ಕಾವಲಿಯ ಆ ಸಾನ್ನಿಧ್ಯ, ಹುಯ್ಯುವವರ ಆ ಪ್ರೀತಿಯ ಏಕಾಂತೋಪಚಾರ ದೊರೆತರೆ "ಸ್ವರ್ಗಕ್ಕೆ ಕಿಚ್ಚು ಹಚ್ಚೆಂದ ಸರ್ವಜ್ಞ". ಅವರು ಮಾಡಿ ಮಾಡಿ ಕೊಡುವುದು, ನಾವು ಬೇಡ ಬೇಡವೆಂದು ತಿನ್ನುವುದು, ಬೇಕಾದ್ದಕ್ಕಿಂತ ಹೆಚ್ಚಾಗುವ ಭಯದ ಮಿತಿಯನ್ನು ಮೀರಿ, ಮಾಡಿದವರಿಗೆ ತೃಪ್ತಿಯುಂಟು ಮಾಡುವುದು ಇಂಥಾ ಪ್ರಪಂಚದ ಮಹಾ ಲಕ್ಷಣ. ಹೋಟೇಲಿನಲ್ಲಿ No Admission ಎಂದು ಬೋರ್ಡು ಹಾಕಿ ಒಳಗೆ ಏನೇನನ್ನೋ ಯಾರು ಯಾರೋ ಮಾಡುವ ಆವರಣದಲ್ಲಿ ಈ ಧಾರಾಳವೆಲ್ಲಿ ಬರಬೇಕು. ಅಂಗಡಿ ಸಾಮಾನು ಮಾರುವ ಕೈಯ ಹಿಡಿತಕ್ಕೂ ಕೊಳ್ಳುವ ಕಿಸೆಯ ಮಿತಿಗೂ ನಿರ್ಘೃಣವಾಗಿ ಒಳಪಡುವದರಿಂದ ಇಕ್ಕಟ್ಟಿಗೆ ಸಿಕ್ಕುವುದು. ಮನೆ, ಅಂಗಡಿ ಎರಡೂ ಒಂದೆಯೇ? ಇದರ ಭೋಗ ಇದಕ್ಕೆ: ಅದರ ಭಾಗ್ಯ ಅದಕ್ಕೆ. ಬೆಲೆಗೆ ಕೊಳ್ಳುವ ಅಂಗಡಿ ಸಾಮಾನಿನ ಮುಖ್ಯ ಲಕ್ಷಣ ಹಿಡಿತ, ಮಿತಿ. ಮಿತದಿಂದಲೇ ಅದರ ವೆಚ್ಚ, ಬೆಲೆ ಹೆಚ್ಚುವುದಾದ್ದರಿಂದಲೂ ಮನೆಯ ತೆರೆಗೈಯ ಧಾರಾಳದಿಂದ ತೃಪ್ತಿ ಬರುವುದರಿಂದಲೂ, ಪಕ್ಷಪಾತಗಳು ಮನೆಯಿಂದ ಅಂಗಡಿಗೆ ತಿರುಗುವ ವಿಪರೀತಕ್ಕೆ ತುಡಿಯುತ್ತವೆ. ಇಂಥ ಬಯಕೆಗಳು ಬದಲುವುದು ಸಂಸ್ಕಾರ ಪ್ರಭಾವದಿಂದಲ್ಲ; ಚಿತ್ತ ಚಾಪಲ್ಯದಿಂದ. ಮನೆಯ ಹೆಂಡತಿ ಈ ಚಾಪಲ್ಯಕ್ಕೆ ಈಡಾದರೆ ಸಂಸಾರದ ಗತಿಯೇನು? ಆಕೆಗೆ ಆ ರಹಸ್ಯ ಹೇಗೆ ಅರ್ಥವಾಗಬೇಕು? ಆದ್ದರಿಂದಲೇ ಆಕೆ ಅಂಗಡಿಯ ಪದಾರ್ಥಕ್ಕೆ ಎರಡನೆಯ ಕೈಯಾಗಬೇಕಾಗುವುದು, ಪಾಪ.

ಮನೆಯಲ್ಲಿ ದಿನವೂ ಕೇಳಿದಾಗಲೆಲ್ಲ ದೋಸೆ ಮಾಡಲಾದೀತೆ? ಆಗದ ಕೆಲಸ. ಆದರೂ ವಾರಕ್ಕೆ ಮೂರು ನಾಲ್ಕು ದಿನವಂತೂ ನಮಗೆ ಆ ಸೇವೆ ದಶದಶಮಾನಗಳಿಂದ ಸಂದಿದೆ. ತುಂಬು ಅನುಭವದಿಂದ, ನಡೆದ ಸಂತೋಷಗಳ ನೆನಪಿಂದ, ಇನ್ನೂ ಆರದ ಉತ್ಸಾಹದಿಂದ ಆಡುವ ಮಾತು ಇದು. ದೂರದ ಅಡಿಗೆಯ ಮನೆಯಿಂದ ಚೊಯ್ ಎಂಬ ಶಬ್ದ ಕೇಳಿಸಿದೊಡನೆಯೇ ಬೈಠಕ್ ಖಾನೆಯಲ್ಲಿ ಕಕ್ಷಿಗಾರರ ನಡುವೆ ಕುಳಿತು ಫೀಸು ಕೇಳುತ್ತಿರುವ ಮೂಗಿಗೂ ಕಿವಿಗೂ ಸಂಬಂಧವೇರ್ಪಡುವುದು. ಎರಡೂ ಅರಳುವುವು. ಒಳಗೆ

ಅರಿಯದಂತೆಯೇ ಆಹ್ಲಾದಿಸುವುದು. ದುರ್ದಮ್ಯವಾದ ಪುಳಕ ಬರುವುದು. ಎಲ್ಲ ಸಂತೋಷಗಳ ಅನುಭವದಲ್ಲಿನಂತೆಯೇ ರಕ್ತದ ವೇಗ ಹೆಚ್ಚುವುದು. ಸುತ್ತಲಿನವರ ಗಮನಕ್ಕೆ ಬೀಳದೆ ಬಾಯಲ್ಲಿ ಲಾಲಾಜಲ ಆಡುವುದು; ತಿಳಿಯಾಗುವುದು. ಬೀದಿಯಲ್ಲಿ ಹೋಗುವ ಯಾವನೋ ಪೋರ, ಯಾವನೋ ರಸಿಕ ಎಲ್ಲಿಂದಲೋ ಬರುವ ದೋಸೆಯ ವಾಸನೆಯನ್ನು ಗ್ರಹಿಸಿ ಗುರುತಿಸುವನು. ವ್ಯಾಖ್ಯಾನ ಮಾಡುವನು. ಅದು ಕೇಳಿಸಿ ಒಂದೇ ಕ್ಷಣದಲ್ಲಿ ಅಸಮಾಧಾನವೂ ಸಮಾಧಾನವೂ ಇತ್ತ ಬೈಠಕ್‌ಖಾನೆಯಲ್ಲಿ ಉಂಟಾಗುವುವು. ಈ ಪ್ರಕರಣದ ಇನ್ನೊಂದು ವಿಶೇಷ: ಕೆಲವು ಗೆಳೆಯರ ಮನೆಯ ದೋಸೆ ಬಹು ಪ್ರಖ್ಯಾತವಾದ್ದರಿಂದ ಆ ಕಾರ್ಯಕ್ರಮದ ವಾಸನೆ ತಟ್ಟಿದರೆ ಸಾಕು, ಸ್ನೇಹಿತರ ಸವ್ವಾರಿ ಅನಿರೀಕ್ಷಿತವಾಗಿ ನೆರೆಯುವುದು. ಐದೈದು ಹತ್ತು ಹತ್ತು ನಿಮಿಷಗಳ ಅಂತರದಲ್ಲಿ ಅವರು ಇವರು ದಯಮಾಡಿಸಿ ಸಂತೋಷಕೂಟವನ್ನು ನಡೆಸುವರು. ಮನೆಯವರ ಮನಸ್ಸಿನಲ್ಲಿ ಈ ಅಭ್ಯಾಗತರ ಎಣಿಕೆ ಮೊದಲೇ ಜಮಾ ಆಗಿರುವದರಿಂದ ಪೂರ್ವ ಸಿದ್ಧತೆ ಇದ್ದೇ ಇರುತ್ತದೆ. ಮನೆಯ ಹೆಂಡತಿ ಸಂಸಾರಿಯಲ್ಲವೇ? ಆದ್ದರಿಂದಲೇ ಯಾವ ಗೆಳೆಯರೂ ಬಾರದ ದಿನ ನಿಮಗೆ ಪ್ರಶ್ನೆ ಕೇಳಿಬರುತ್ತದೆ: ಇವತ್ತೇನು ಅವರ ಸುಳಿವಿಲ್ಲ? ಇವರ ಭೇಟಿಯಿಲ್ಲ? ಇನ್ನೊಬ್ಬರಿಗೆ ಹೇಳಿಕಳಿಸಬಾರದಿತ್ತೇನು? ಮುಂತಾಗಿ.

ಮನೆಯ ದೋಸೆಯವರೆಗೆ ಬಂದಾಯಿತು. ಇವು ಸಾದಾವೂ ಅಲ್ಲ, ತುಪ್ಪವೂ ಅಲ್ಲ; ಎರಡೂ ಹೌದು. ಮನೆಯಲ್ಲಿ ಗೃಹಸ್ಥರು ಭೇದಮಾಡುವುದು ಹೇಗೆ? ಅದು ಸಾದಾವಾದರೂ ಹೋಟೆಲಿನ ಒಣಕಲು ಚಕ್ಕಳವಾಗದು; ತುಪ್ಪವೆಂದರೆ ಹನಿಯುವ ಬಸಿಯುವ ೫೮ರ ಧಾರಾಪುರವಾಗದು. ಜೊತೆಗೆ ಮನೆಯ ಯೋಗ್ಯತೆಗೆ ತಕ್ಕಂತೆ ಮೇಲುತ್ತುಪ್ಪ ಬೀಳಬೇಕಲ್ಲವೇ? ಕೇಳಲಿ ಕೇಳದಿರಲಿ, ಹಸ ಎಮ್ಮೆ ಕಟ್ಟಿರುವ ಮನೆಗಳ ಹೈನದ ಸಮೃದ್ಧಿ ದೋಸೆಯ ಮೇಲೆ ಧುಮುಕುತ್ತದೆ. ಈ ಬಗೆಗೂ ಇಂದಿಗಿಂತ ನಮ್ಮ ಕಾಲ ಇನ್ನಷ್ಟು ಅನುಕೂಲದ್ದಾಗಿತ್ತು. ಹೊರಗೆ ಹೆಚ್ಚು ದುಡಿತವಿರುತ್ತಿರಲಿಲ್ಲ. ಕಚೇರಿಗೆ ಬೇಕಾದಾಗ ಬೇಕಾದಷ್ಟು ಮಾತ್ರ ಹೋಗಿ ಬರಬಹುದಾಗಿದ್ದ ಕಾಲ. ಹೆಚ್ಚು ಕಾಲ ಕಚೇರಿಯಲ್ಲಿದ್ದ ಮಾತ್ರದಿಂದ ಈಗ ಕೆಲಸ ಹೆಚ್ಚಾಗುತ್ತಿಯೆಂದಲ್ಲ– ಆಗ ಕಾಲಾವಕಾಶ ಧಾರಾಳವಾಗಿರುತ್ತಿತ್ತು ಎನ್ನುವುದಕ್ಕಾಗಿ ಮಾತ್ರ ಹೇಳಿದೆ–ನಿಶ್ಚಿಂತೆಯಿಂದ ಒಳಗೆ ಕುಳಿತು ದೋಸೆ ತಿನ್ನುವುದಕ್ಕೆ. ದಿನದಿನಕ್ಕೆ ನಮ್ಮ ಬದುಕು ಬಿಗಡಾಯಿಸುತ್ತಿದೆ. ಯಾವುದಕ್ಕಾಗಿ ದುಡಿತವೋ ಆ ಗುರಿಯ ಸಾಧನೆಗೆ ಸಮಯವೇ ಇಲ್ಲ. ಮನೆ, ಸಂತೋಷ, ಊಟ, ಉಪಚಾರ, ಮಾನ



ಮರ್ಯಾದೆ, ಶಾಂತಿಗಳು ಬೇಕೆಂದು ತಾನೇ ಈ ಚಾಕರಿಗಳನ್ನೆಲ್ಲ ನಾವು ಮಾಡುವುದು, ಚಾಕರಿಯ ಅನಿಷ್ಟ ಅಗೌರವಗಳನ್ನೆಲ್ಲ ನುಂಗಿಕೊಳ್ಳುವುದು, ಚಾಕರಿ ಮಾಡುವುದಕ್ಕೊಪ್ಪುವುದು? ಅದಕ್ಕೆ ಬೇಕಾದ ನಾಲ್ಕು ಕಾಸು ಸಂಪಾದಿಸುವುದಕ್ಕೆ ಜೀವಿತ ಕಾಲವೆಲ್ಲ ವೆಚ್ಚವಾಗಿಬಿಡುವುದು. ಅದರಲ್ಲಿ ತೊಡಗುವುದು, ಅದನ್ನು ನೆನೆಯುವುದು, ಅದನ್ನೇ ಕುರಿತು ಎಲ್ಲೆಲ್ಲಿಯೂ ಮಾತನಾಡುವುದು, ಅದಕ್ಕಾಗಿ ಸಿದ್ಧವಾಗುವುದು, ಗಾಡಿ ರೈಲು ಬಸ್ಸು ಕಾಯುವುದು, ತಡವಾದರೆ ನಿಮಿಷ ನಿಮಿಷಣಿಸಿ ತಲ್ಲಣಿಸುವುದು. ಪುರುಷಾರ್ಥಕ್ಕಿಂತ ಅದನ್ನು ಸಾಧಿಸುವ ಗಾಸಿಯೇ ನಮ್ಮ ಪಾಲಿಗೆ ಉಳಿಯುವ ಭಾಗ್ಯ ಇಂದು. ಇಂಥ ಕಾಲದಲ್ಲಿ ಸಾವಕಾಶ, ಸಾವಧಾನ ಎಲ್ಲಿಂದ ಬರಬೇಕು? ಅವಕಾಶ, ಅವಧಾನ ದೊರಕವಾದರೆ ದೋಸೆಯ ಸಂಸ್ಕೃತಿಗೆ ಧಕ್ಕೆ ಬರುವುದು.

ಮನೆಯ ದೋಸೆಗಳಲ್ಲಿ ಬಗೆಗಳು ಅನೇಕ. ಶುದ್ಧ ಜಾತಿಗಳನ್ನು, ಅವುಗಳಲ್ಲಿ ಮುಖ್ಯವಾದುವುಗಳನ್ನು ಮಾತ್ರ ಇಲ್ಲಿ ನೆನಸಿಕೊಳ್ಳಬಹುದು. ಒಂದೊಂದು ಮನೆಗೆ, ಊರಿಗೆ, ಒಂದೊಂದು ಜನಕ್ಕೆ ಒಂದೊಂದು ಬಗೆ ಸಿದ್ಧ. ಬೀದಿಯಲ್ಲಿ ಕುಳಿತು ಮಾರುವ, ಮಡಕೆಯಲ್ಲಿ ಮಾಡಿದ ಕುದುಪವಲಕ್ಕಿಯ ದೋಸೆಯಂಥದನ್ನೂ ಸಾಮಾನ್ಯ ಬಳಕೆಯವನ್ನೂ ರೈಲ್ವೇ ಸ್ಟೇಷನ್, ಮಾರ್ಕೆಟ್, ಮಂಡಿಪೇಟೆಗಳಲ್ಲಿ ಅನ್ನದೊಡನೆ ಮಾರುವ ದೋಸೆಯ ವಿಷಯ ಇಲ್ಲಿ ನನಗೆ ಸಂಬಂಧಿಸದ್ದು. ಉಳಿದವರ ಪರಿಚಯ ನನಗಿಲ್ಲವಾಗಿ ಅದನ್ನು ಕುರಿತು ನುಡಿದು ಅಪಚಾರ ಮಾಡಲು ನಾನೇನು ವಿಮರ್ಶಕನು ಕೆಟ್ಟೆನೆ? ದೋಸೆಯ ಆಕಾರ, ಸ್ಟ್ಯಾಂಡರ್ಡ್ ಒಬ್ಬೊಬ್ಬರಲ್ಲಿ ಒಂದೊಂದು. ಮುಖ್ಯ ಬಗೆಗಳು ದಪ್ಪ ಜಾತಿಯವು, ತೆಳ್ಳನೆಯವು. ದಪ್ಪವುಗಳಲ್ಲಿ ಮಖಮಲ್ಲಿನಂತೆ, ಮೈಸೂರು ಪಾಕಿನ ಬಿರುಕಿನಂತೆ, ಎಲ್ಲರ ಮನೆಯ ದೋಸೆಯೂ ತೂತೇ, ಕೇಳಿಲ್ಲವೇ?– ಜೇನುಗೂಡಿನ ಹಟ್ಟಿಯಂತೆ ಮೃದುವಾದುವು ಒಂದು; ಬಳುಕಿಸದೆ ಎತ್ತಲಾಗದ ತೆಳುವಿನದೂ ನವುರಿನದೂ ಇನ್ನೊಂದು. ಅಗಲವಾದ ದೊಡ್ಡ ಬಿಸ್ಕತ್ತಿನಂತೆ ಉಡುಪಿಯಲ್ಲಿ ಮಾಡುವ ದಪ್ಪ ದೋಸೆಯದೊಂದು ಬಗೆ. ಇನ್ನೊಂದು, ಬಾಣಲೆಗಳಲ್ಲಿ ಮಾಡುವ ಹದದ್ದು: ಇನ್ನೊಂದು ಶ್ರೀಮಂತ, ರಾಜ ಮಹಾರಾಜರ ಸೇವನೆಗಾಗಿ ಮಾಡುವ ಫೆಲ್ಟ್, ವುರ್ಸ್ಟೆಡ್ ಹದದ ದೋಸೆ; ಇನ್ನೊಂದು ಕೆಲವರಿಗೆ ರುಚಿಸುವ ಪಾರ್ಚಮೆಂಟ್ ದೋಸೆ. ಯಾವುದೂ ಹರುಕಲು ಮುರುಕಲು ಆಗಬಾರದು. ಬಹುಶಃ ಒಂದು ಬಗೆಯದನ್ನು ಬಿಟ್ಟು ಸಾಧಾರಣವಾಗಿ ದೋಸೆ ಮುರಿದರೆ ಹರಿದರೆ ಹಾಕುವ ಕೈ ಪಳಗಿಲ್ಲವೆಂದರ್ಥ. ಪಳಗದ ಸಂಗತಿಗಳನ್ನು ನನ್ನ ಮುಂದೆತ್ತಬೇಡಿ. ಹಸಿಯಲ್ಲದ,

ಅಂಟಿಲ್ಲದ, ಸೀಯದ, ಒಣಕಲಲ್ಲದ, ಮೃದುವಾದ, ಎಳಗೆಂಪಿನ, ಹಲ್ಲಿಗೆ ಹದವಾಗಿ ನುರಿಯುವ, ಕಡಿದ ಕೂಡಲೆ ಸಿಹಿಯಾಗುವ, ಬಾಯಲ್ಲಿ ನೀರೂರಿಸುವ, ಅಗಿವ ಹೆಚ್ಚು ಅಗತ್ಯಕೊಡದೆ ನಾಲಗೆಯ ತಿರುವಿಗೆ ಸಿಕ್ಕುವ ಪ್ರಕಾರ ಅವ್ವಲ್ ಜಾತಿಯದು. ಉಳಿದವು ಎಷ್ಟೋ ಇವೆ. ಇವನ್ನು ಇತರರು ವರ್ಣಿಸಲಿ.

ಈ ಎಲ್ಲ ರೀತಿಯನ್ನೂ ಕೆಂಡ, ಕಾವಲಿ, ಕೈವಾಡ ಸಾಧಿಸಬಲ್ಲವು, ಅವುಗಳ ಮನಸ್ಸು ಒಲಿದರೆ ಆಕೃತಿಯಾಯಿತು, ರಚನೆಯಾಯಿತು. ಇನ್ನು ರುಚಿಯ ವಿಷಯ ತಿನ್ನುವವರದು. ಅವರ ಭೋಗಕ್ಕಾಗಿಯಲ್ಲವೇ ಎಲ್ಲ ಪ್ರಯತ್ನ? ಅವರು ಮಾಡಬಲ್ಲವರಾಗಬೇಕಿಲ್ಲ. ವಿಮರ್ಶೆ ವ್ಯಾಖ್ಯಾನ ತಿನ್ನುವವರಿಗೆ ಸಂಬಂಧಿಸಿದುದೇ ಹೊರತು ಮಾಡುವವರಿಗಲ್ಲ. ಅವರು ಅಡಿಗೆಯವರಲ್ಲ, ಅವರು ರಸಿಕರು, ವಿಮರ್ಶಕರು; ಅವರ ಖುಷಿಗಾಗಿ, ಭೋಗಕ್ಕಾಗಿ, ಪರಮಾಯಿಷಿಗಳಿಗಾಗಿ ಮಾಡುವವರೆಲ್ಲ ಮಾಡುವುದು. ಮಾಡುವವರ ರುಚಿ ತಿನ್ನುವವರದೂ ಆಗಿದ್ದರೆ ಅಥವಾ ತಿನ್ನುವವರ ರುಚಿಗೆ ತಕ್ಕಂತೆಲ್ಲ ಮಾಡುವವರು ಮಾಡುವರಾದರೆ ಅದೂ ಸರಿಯೇ. ಆದರೆ ಎಲ್ಲಿಯೇ ಆಗಲಿ, ಎಂದೇ ಆಗಲಿ ಇದು ಸತ್ಯ! ನೂರು ತರಹ ದೋಸೆ ಚೆನ್ನಾಗಿರಬಲ್ಲದು, ಇಲ್ಲಿನದೇ ಚೆನ್ನ ಇನ್ನೊಂದಲ್ಲ, ಇದು ಹೀಗಿದ್ದರೆಯೇ ಚೆನ್ನ, ಬೇರೆ ಚೆನ್ನಾಗದು ಎಂಬ ಹಠಮಾರಿತನ ಅವಿವೇಕ. ತಿಳಿದವರ, ಅನುಭವ ರಸಿಕರ ಲಕ್ಷಣವಲ್ಲ, ಮಾತಲ್ಲ. ಯಾರು ಇದಕ್ಕೆಲ್ಲ ಚಿಕಿತ್ಸೆ, ವಿಧಾನ ವಿಧಿಸುವವರು? ಸಿದ್ಧಹಸ್ತದ ವೈದ್ಯ ಕೊಟ್ಟ ನೀರು, ಬೂದಿ ಪರಮೌಷಧಿಯೂ ಸಂಜೀವನವೂ ಆಗಬಲ್ಲದು ಎನ್ನುವುದಿಲ್ಲವೇ? ಸಿದ್ಧಹಸ್ತದ ಕೈಯ ದೋಸೆ ಸುಕೃತ. ತಾವೇ ಸುಟ್ಟು ಬೆಂದಿರುವ ವಿದಗ್ಧರಿಗೆ ಇದು ವೇದ್ಯವಾದ ಸಂಗತಿ.

ಮನೆಯಲ್ಲಿನವೂ ಎಷ್ಟು ಬಗೆಯವೋ ಪ್ರಕಾರಗಳು ಎಂದೆನಲ್ಲವೇ? ಮೆಂತೆಯದ್ದು, ಕಾಯಿದೋಸೆ, ಉದ್ದಿನದು, ಅವಲಕ್ಕಿಯದು, ಅಕ್ಕಿ ತೊಗರಿ ನುಚ್ಚಿನದು, ತಪ್ಪಲೆ ದೋಸೆ, ರವೆ ದೋಸೆ, ಮಸಾಲೆ ಹಾಕಿದ್ದು, ಹಾಕದ್ದು, ಉರುಳುಗಡ್ಡೆ ಅಥವಾ ಮೂಲಂಗಿ, ಸೌತೆಕಾಯಿ–ಕೆಲವರಿಗೆ ನೀರುಳ್ಳಿ–ತುರಿಯನ್ನೋ ಇನ್ನಾವುದನ್ನೋ ಸೇರಿಸಿ ಹದ ಮಾಡಿದ್ದು. ಬೂದುಗುಂಬಳ, ಸೋರೆ ಸೌತೆಗಳ ಎಳ ತಿಳಲನ್ನು ಬೆರಸಿದ್ದು ಇತ್ಯಾದಿ. ಕೊತ್ತಂಬರಿ ಸೊಪ್ಪು, ಮೆಣಸಿನಕಾಯಿ ಹಾಕಬಹುದು ಬಿಡಬಹುದು; ಕೆಲವಕ್ಕೆ ಹಸಿಯ ತೆಂಗಿನಕಾಯಿ ಸೊಗಸು. ಕೆಲವಕ್ಕೆ ಒಣಕೊಬ್ಬರಿ ತುರಿ ಬೆರೆದಂತೆ ಕಾಯಿ ತುರಿ ಬೆರೆಯದು. ಆಯಾ ದೋಸೆಗೆ ತಕ್ಕಂತೆ ಚಟ್ನಿಯೋ, ಪುಡಿಯೋ ಸಾಹಿತ್ಯ ಬೇಕು. ಪಲ್ಯಗಳು ಹಾಗೂ ಹೀಗೂ ಹೊಂದುತ್ತವೆಯಾದರೂ ಎಲ್ಲ ಅಲ್ಲ. ದೋಸೆಯ ಜೊತೆಗೆ ಆಲೂ ಪಲ್ಯ ಎತ್ತಿದ್ದು.



ಕೆಲವರು ಆ ಪಲ್ಯಕ್ಕಾಗಿಯೇ ಅಂಗಡಿಯಲ್ಲಿ ದೋಸೆ ಆರ್ಡರ್ ಮಾಡುತ್ತಾರೆ. ಆದರೂ ದೋಸೆಗೆ ಚಟ್ನಿ ಹೊಂದುವಷ್ಟು ಸ್ವಾರಸ್ಯವಾಗಿ ಪಲ್ಯಗಳು ಹೊಂದುವವೋ ಇಲ್ಲವೋ. ಇದು ರುಚಿಯ ಪಕ್ಷಪಾತ ಭೇದವಾದ್ದರಿಂದ ಅಂಥದನ್ನು ಚರ್ಚಿಸಿ ಫಲವಿಲ್ಲ. ಒಲಿದರೆ ಮಾತ್ರ ಬರಬಲ್ಲ ಒಲವು ಬೇಡಿದರೆ ಬಂದೀತೇ? ಬಗೆಬಗೆಯ ಚಟ್ನಿಗಳು ಒಪ್ಪುವುವಾದರೂ ತೆಂಗಿನಕಾಯದು ಉತ್ಕೃಷ್ಟ; ಕಾಯಿ ತನಿಯಾಗಿದ್ದಷ್ಟೂ ಸುಖ. ಕಣಿವೆ ಕೆಳಗಿನವರು ಎಣ್ಣೆ, ಮಳಗಾಯಿಪುಡಿ ಸೇರಿಸುವ ಕಯಾಲಿನವರು. ಆ ಸಂಭಾರ ವಿಚಿತ್ರವಾಗಿ ಕಿವಿಗೆ ಕೇಳಿಸಿದರೂ ಕಣ್ಣಿಗೆ ಕಾಣಿಸಿದರೂ ಪರವಾ ಇಲ್ಲ. ನಮ್ಮ ತೂಕಕ್ಕೆ, ಮಾನಕ್ಕೆ ಅದು ಏರದಿದ್ದರೂ ದಕ್ಷಿಣದ ಬಹುಭಾಗಕ್ಕೆ ಪ್ರಿಯವಾದ್ದರಿಂದ ಅದಕ್ಕೆ ಒಂದು ರೀತಿಯ ಬಹುಮತ ಸಿಗುತ್ತದೆ. ಬಹುಮತವನ್ನು ಈ ಕಾಲದಲ್ಲಿ ಅಲಕ್ಷಿಸುವ ಹಾಗಿಲ್ಲ. ಆದ್ದರಿಂದ ದೋಸೆ ತಿನ್ನುವಾಗ ದಕ್ಷಿಣದವರನ್ನು ಬಿಟ್ಟರೆ ಉಳಿಯುವ ಹಾಗಿಲ್ಲ. ಉತ್ತರದವರು ದೋಸೆಯ ಪಾಲಿಗಿಲ್ಲ. ಉತ್ತರವೇ ಏಕೆ? ತುಂಗಭದ್ರೆಯಾಚೆಯ ನಮ್ಮ ಸೋದರ ಕನ್ನಡಿಗರಿಗೆ ಕೂಡ ದೋಸೆ ದಕ್ಕಿದ್ದಲ್ಲ. ಮರಾಠಿ. ಹಿಂದೂಸ್ಥಾನಿ ಸಂಪ್ರದಾಯದವರು ದೋಸೆ ಒಲಿಯದ ನಿರ್ಭಾಗ್ಯರು. ಅವಕ್ಕಾಗಿ ನಮ್ಮವರೆಗಾದರೂ ಬರಬೇಕು. ಮನೆಯ ದೋಸೆಯೂ ಮದುರೆ ಶಿತ್ತಂಬಲಂ ದೋಸೆಗಳೂ ಸ್ವಲ್ಪ ಬಿಸಿ ಕಡಮೆಯಾದರೂ ರುಚಿಗೆಡವು. ಮನೆಯ ತೆರದವು ಅವು. ಪಲ್ಯವಿದ್ದರೂ ಒಳಿತೇ; ಇಲ್ಲವಾದರೆ ನಷ್ಟವಿಲ್ಲ.

ದೋಸೆ ಮೃದುವಾಗಿ, ಬಿಸಿಯಾಗಿ, ಸವಿಯಾಗಿ ಆದಾಗ ತಿಂದ ಬಾಯಿ ಚೊಕ್ಕಟವಾಗುವುದು. ಗಂಟೆಗಳವರೆಗೆ ಆ ಸುಖದ ಭಾವನೆ, ನೆನಪು, ಪರಿಮಳ ಉಸಿರಲ್ಲಿ, ಬಾಯಲ್ಲಿ, ಒಳಗೆ ನಿಲ್ಲುತ್ತ ಹಾಯೆನಿಸುತ್ತಿರುವುದು. ಎಷ್ಟರಮಟ್ಟಿಗೆ ಸಂತೃಪ್ತಿ ತುಂಬಿದೆಯೆಂಬುದನ್ನು ಒಳಗು ನಿರಂತರವಾಗಿ ತಿಳಿಸುತ್ತಿರುವುದು. ಒಳ್ಳೆಯ ದೋಸೆ ತಿಂದು ಹೋಗಿದ್ದ, ತಿನ್ನಿಸಿದ್ದ ಆಫೀಸರಿಂದ ದೊಡ್ಡ ಪ್ರಯೋಜನ ಪಡೆದವರುಂಟು. ಲಕ್ಷಾಂತರ ರೂಪಾಯಿನ ಕಂಟ್ರಾಕ್ಟು ಲೈಸೆನ್ಸು ಬೇಕಾದರೆ ಅವನ್ನು ಪಡೆಯಲು ಇದಕ್ಕಿಂತ ಮೇಲ್ತೆರದ ಉಪಚಾರ ಬೇರೊಂದಿಲ್ಲವೆನ್ನದವರಿಲ್ಲ. ಬಿದ್ದಿದ್ದ ಎಷ್ಟೋ ಜುಲ್ಮಾನೆಗಳು ವಜಾ ಆಗಿವೆ. ಶಾನುಭೋಗರು ಕಂದಾಯಕ್ಕೆ ವಾಯಿದೆ ಕೊಡಿಸುತ್ತಾರೆ. ಬರ್ತಫ್ ಆದವರ ಮೇಲಿನ ಆಜ್ಞೆಗಳನ್ನು ಹಿಂದಕ್ಕೆ ತೆಗೆದುಕೊಂಡ ಸಂದರ್ಭಗಳಿವೆ. ತಿಂದಂದು ಮನಸ್ಸು ಪ್ರಸನ್ನ; ದಿಕ್ಕುದೆಸೆ, ನೆಲ, ಜಲ, ಬಾನು ರಸ್ತೆ, ಕಚೇರಿ ಫೈಲು, ಒಳಗೆ ಸುತ್ತ ಎಲ್ಲವೂ ಪ್ರಸನ್ನ. ನಡೆವ ದಾರಿ ಸುಗಮ. ಲೋಕ ನುಣುಪಾಗಿ ಗಾಜಿನಂತೆ, ಸುಭ್ದರವಾದ ಗಾಜಿನಲ್ಲಿನಂತೆ ಕಾಣುವುದು. ಹಾಡಬೇಕೆನ್ನಿಸುವುದು. ಗಟ್ಟಿಯಾಗಿ ಹಾಡಿದರೆ ಅಸಭ್ಯವೆಂದೋ, ಕರ್ಕಶವೆಂದೋ

ನುಡಿಯುವವರಿಲ್ಲದಿದ್ದರೆ ಗಟ್ಟಿಯಾಗಿಯೇ ಹಾಡೋಣವೆನ್ನಿಸುವುದು. ಸಣ್ಣ ದನಿಯನ್ನಾದರೂ ಅಡಗಿಸುವುದು ಅಶಕ್ಯವಾಗುವುದು. ಬೀದಿಯಲ್ಲಿ ಕಾಣುವವರಿಗೆಲ್ಲ ಮುದ್ದು ಮುಚ್ಚಟೆ ಹರಡೋಣವೆನ್ನಿಸುವುದು. ದೋಸೆಯ ಹದ ಕೆಡಿಸಿ ನ್ಯಾಯಾಧೀಶರನ್ನು ಬೆಂಚಿಗೆ ಕಳಿಸಿ ನೋಡಿ; ಯಾವ ದುರ್ದೈವದ ಅಪರಾಧಿಗೋ ಫಾಸಿ ಶಿಕ್ಷೆ ಕಾದಿರುತ್ತದೆ.

ಸ್ನೇಹಿತರೊಬ್ಬರು ಆಕ್ಸ್‌ಫರ್ಡಿಗೆ ಹೋಗಿದ್ದರು. ಅಲ್ಲಿಂದ ಫ್ರಾನ್ಸ್, ಜರ್ಮನಿ, ಇನ್ನೂ ಎಲ್ಲೆಲ್ಲಿಯೋ ಸುತ್ತಿಬಂದವರು ಅವರು. ಊಟದ ರಸಿಕರೂ ಆದ ಪ್ರಯುಕ್ತ ಯಾವ ದೇಶದಲ್ಲಿ ಯಾವುದು ಉತ್ತಮ ಖಾದ್ಯವೋ ಪಾನೀಯವೋ ಅದನ್ನೆಲ್ಲ ಅರಿತು ಬಂದಿದ್ದವರು. ಅವರು ಜುಜುಬಿ ನೂರು, ಸಾವಿರ ಸಂಬಳದವರಲ್ಲ. ದೊಡ್ಡ ಕೀರ್ತಿ ಸಂಪಾದಿಸಿದವರು. ಆ ತಿಂಡಿ ಈ ತಿಂಡಿಗಳನ್ನು ವರ್ಣಿಸಿ ನಮಗೆ ಅವುಗಳ ಸಹನೆ ಪ್ರೀತಿ ಉಂಟು ಮಾಡಿದರು. ಪಾಶ್ಚಿಮಾತ್ಯರ ಅಡಿಗೆ ಹೇಗೇ ಇರಲಿ, ಅವರು ಹೇಗೇ ವರ್ಣಿಸಲಿ, ನಮ್ಮ ಅಡಿಗೆಯ ಹತ್ತಿರಕ್ಕೆ ಬರಲಾರದು ಎಂದು ನಮಗೆ ಶತಶತಕಗಳಿಂದ, ಏಕೆ ಅಲೆಕ್ಸಾಂಡರ್ ಕಾಲದಿಂದ, ತೀರ್ಮಾನವಾಗಿಹೋಗಿದೆ. ಉಪ್ಪು, ಹುಳಿ, ಖಾರ, ಬೇರೆಯಾಗಿ ಬೆರೆಸಿಕೊಳ್ಳುವವರ ಊಟವೇನು ಊಟ ಹೇಳಿ. ನಮ್ಮ ಸ್ನೇಹಿತರ ಮುಡಿನುಡಿ ಸಿದ್ಧಾಂತಕ್ಕೆ ಬಂದಿದ್ದ ಅವರ ನಿಶ್ಚಯಕ್ಕೂ ಅಂತಃಪ್ರಮಾಣಕ್ಕೂ ಸಾಕ್ಷಿಯಾಗಿತ್ತು. ಅದನ್ನು ಹೇಳುವಾಗ ಅವರ ಮುಖ ಅರಳಿತ್ತು. ಕಣ್ಣು ತುಟಿ ಅಭಿಮಾನದಿಂದ ಬಿರಿದಿದ್ದವು. ಶುಭ್ರವಾದ ಅವರ ದಂತಪಕ್ತಿ ಪ್ರಸನ್ನವಾದ ಮುಗುಳುನಗೆಯ ಬೆಳಕಿನಲ್ಲಿ ದೀಪ್ತವಾಗಿತ್ತು. ಹೇಳಿದರು ಅವರು: 'ಭೂಮಿಯ ನಾಲ್ಕು ದಿಕ್ಕುಗಳಲ್ಲಿ ತಿರುಗಿ ಬನ್ನಿ; ಸ್ವರ್ಗದ ಎಂಟು ಗಾಳಿಗಳನ್ನು ಕೇಳಿ' ಅವರು ಆ ಕಾಲದಲ್ಲಿ, ಈಗ್ಗೆ ೩೦–೩೫ ವರ್ಷಗಳ ಹಿಂದಿನ ಒಂದು ಸ್ವರ್ಣಯುಗದಲ್ಲಿ ಇಂಗ್ಲಿಷಿನಲ್ಲಿ ಆಡಿದ ಮಾತು ಅವು. ನನ್ನ ಕಿವಿಯಲ್ಲಿಯೂ ಅಂತಃಕರಣದಲ್ಲಿಯೂ ಮಾರ್ದನಿ ಕೊಡುತ್ತಿವೆ ಇನ್ನೂ ಹೇಳಿದರು: 'ನಮ್ಮೆರಡು ಮೂರು ಪದಾರ್ಥಗಳಿಗೆ ಸಮನಾದ ಖಾದ್ಯ ಲೋಕದಲ್ಲಿ ಇನ್ನೊಂದಿಲ್ಲ. ಹಿದಕವರೆ ಮೇಲೋಗರ, ತುಣಿತೇಂಗೊಳಲು, ಎಲ್ಲಕ್ಕೂ ಅತಿಶಯವಾಗಿ ನಮ್ಮ ದೋಸೆ'. ಇನ್ನಾರಿಗೆ ಹೇಗೆನಿಸುವುದೋ, ನನಗಂತೂ ಈ ಸತ್ಯ ವಾದಾತೀತ; ಅಖಂಡ; ಪರಮ ಪ್ರಮಾಣದ್ದು; ಸ್ವಯಂಸಿದ್ಧ. ಅಂಥ ಮಾತಿಗೆ ವೃತ್ತಿಯೇಕೆ? ವ್ಯಾಖ್ಯಾನವೇಕೆ? ಟೀಕೆ ಟಿಪ್ಪಣಿ ಸಲ್ಲದ, ಅವಕ್ಕೆ ಮೀರಿದ, ನಿರ್ವಚನಕ್ಕೆ ಎಟುಕದ ಸತ್ಯ ಅದು. 'ಸಿದ್ಧ ಸಾಧನಂ ದೋಷಃ' ಎನ್ನುವ ತಾರ್ಕಿಕರಾರೂ ಅಲ್ಲಿರಲಿಲ್ಲವಾಗಿ ನಿಂದಾಸ್ತುತಿ ಮಾಡಿಯೂ ಅದನ್ನು ಹೊಗಳಬೇಕಿರಲಿಲ್ಲ. ನಿಮ್ಮಲ್ಲಿಯೂ ಯಾರೂ



ಇರಲಾರಿರಿ. ಇಂತಹ ಸತ್ಯವನ್ನು ಹೊಸತಾಗಿ ಸ್ಥಾಪಿಸಬೇಕಾದ್ದೇನಿದೆ? ಎಂದಿಗೂ ನಮಗೆ ಹೆಮ್ಮೆಯೇ; ಯೋಗ್ಯತೆಯಲ್ಲಿ, ಸಂಸ್ಕೃತಿಯಲ್ಲಿ, ಆಧ್ಯಾತ್ಮ ವಿಚಾರದಲ್ಲಿ, ಮಾತಿನಲ್ಲಿ, ಅಭಿಮಾನದಲ್ಲಿ ನಮ್ಮನ್ನು ಇನ್ನಾವ ಜನಾಂಗ ಮೀರಿಸಬಲ್ಲದು? ಹೀಗಿರುವಾಗ ದೋಸೆಯನ್ನು ಕುರಿತು ಇಂಥ ಮಹನೀಯರು ಮಾಡಿದ ಪ್ರಶಂಸೆಯನ್ನು, ಕಪಟವರಿಯದ ಸ್ನೇಹಿತರೊಡನೆಯ ಸಲ್ಲಾಪದಲ್ಲಿ ತೊಡಗಿದ್ದ ಅವರ ಮಾತನ್ನು ಒಪ್ಪದ, ಅದಕ್ಕೆ ಸಂತೋಷಪಡದ ಬಡವ ಯಾವನಿದ್ದಾನು?

ದೋಸೆ ಆರೋಗ್ಯವೋ ಅನಾರೋಗ್ಯವೋ ನಾನರಿಯೇ. ಚೆನ್ನಾಗಿ ದೋಸೆ ಮಾಡಿದರೆ ಎಂತಹ ಸ್ಥಿತಿಯಲ್ಲಿಯೂ ನನಗೇನೋ ಕಬೂಲೇ. ಮನೆಯಲ್ಲಿ ಮಾಡಿದರೆ ಮಾರು ನಾಲ್ಕು, ಅಂಗಡಿಯದಾದರೆ ಒಂದಾದರೂ ಪೂರ್ತಿ–ಒನ್ ಬೈ ಟೂ, ಥೂ ಅಲ್ಲ–ಸ್ಪೆಷಲ್ ಮಸಾಲೆ ತಿನ್ನಲು ನಾನಂತೂ ಸಿದ್ಧ. ಒಂದು ಸಲ ಗೆಳೆಯರೊಬ್ಬರ ಮನೆಗೆ ಊಟಕ್ಕೆ ಕರೆದಿದ್ದರು; ಹೋದೆವು. ಸ್ವಲ್ಪ ತಡಮಾಡಿ ಹೋಗಬೇಕಾಯಿತು. ಊಟಕ್ಕೆ ಕುಳಿತು ತೊಡಗಿದ ಒಡನೆಯೇ ಅಲ್ಲಿನ ಯಜಮಾನಿತಿಯರು ನಮ್ಮ ಲಕ್ಷಣವನ್ನು ಗುರುತಿಸಿದರು: 'ನಿಮಗೆ ಆಗಿರಬೇಕು, ಆ ಶನಿ, ಮಸಾಲೆ ದೋಸೆ. ಈ ಊಟ ಹೇಗೆ ರುಚಿಸೀತು. ನಿಮಗಾಗಿ ಈ ಎಲ್ಲ ಅಡಿಗೆ ಏಕೆ ಮಾಡಿ ಕಾಯಬೇಕೋ' ಎಂದರು. ಅದು ಬಹುದಿನದ ಸ್ನೇಹಿತರ ಪ್ರೀತಿಯ ಆಕ್ಷೇಪಣೆಯಾದ್ದರಿಂದ ಕೋಪವುಂಟುಮಾಡಲಿಲ್ಲ. ಆದರೆ ಸಾಮಾನ್ಯವಾಗಿ ಸಂಕೋಚವಿಲ್ಲದ ಕಡೆ ನಾಚಿಕೆಯಾಯಿತೆಂದರೆ ಅದರ ಅರ್ಥವನ್ನು ನೀವು ಗ್ರಹಿಸೀರಿ. ನಿಜವನ್ನೇ ನುಡಿವವರ ಮುಂದೆ ಸುಳ್ಳಾಡುವುದಾದರೂ ಹೇಗೆ? ಆದರೂ, ಆದರೂ.... ಅದನ್ನು ಶನಿ ಎನ್ನಬಾರದಾಗಿತ್ತು ಅವರು. ದೋಸೆ ಚೆನ್ನಾಗಿತ್ತು....

ಅವರು ತಾನೆ ಏನು ಮಾಡಿಯಾರು? ನಮಗಾಗಿ ಬೆಳಗ್ಗೆಯಿಂದ ದುಡಿದು ಪಲ್ಲೆಯ, ಪಾಯಸ, ಪಕ್ವಾನ್ನಗಳನ್ನು ಮಾಡಿ ಔತಣದ ಊಟಕ್ಕೆ ಕರೆದಿದ್ದವರು. ನಾವು ಗಡದ್ದಾಗಿ ಮೊದಲೇ ಮಸಾಲೆ ದೋಸೆ ತಿಂದು ಹೋದರೆ ಅವರ ಮನಸ್ಸಿಗೆ ಹೇಗೆನಿಸಬೇಕು? ಬೇಸರವಾಗದಿರುತ್ತದೆಯೇ? ನೀವೂ ಹಾಗೇ ಅಂದೀರಿ. ನಿಮ್ಮ ಮಾತಿನಲ್ಲಿ ನಯವಿದೆ; ಧರ್ಮವಿದೆ. ಅವರಲ್ಲಿ ಸಹಾನುಭೂತಿ, ಗೌರವ ಇವೆ. ಆಕ್ಷೇಪಣೆಯಲ್ಲಿ ಔಚಿತ್ಯವೂ ಪ್ರಕರಣಶುದ್ಧಿಯೂ ಇವೆ. ನಾನು ಬಲ್ಲೆ. ಅಪ್ಪರ್ಥ ಮಾಡಿಕೊಳ್ಳಲಾರದ ಮಡ್ಡಿಯೇ, ಗೊಬ್ಬಳಿ ತುಂಡೆ ನಾನೇ? ಆದರೆ ನಮ್ಮ ಪರವಾಗಿಯೂ ಒಂದು ಮಾತನ್ನು ಹೇಳುತ್ತೇನೆ. ಸಹಾನುಭೂತಿ ಆದೀತು. ಮನೆಯ ಮಾಹಾತಾಯಾದ್ದರಿಂದ ಆಕೆಗಂತೂ ಆಯಿತು–ಕತೆ ಹೇಳಿದ ಮೇಲೆ. ಅವರ ಮನೆಯಲ್ಲಿ ಹೋಗುವ ದಾರಿಯಲ್ಲಿಯೇ ಈ....ಹೋಟೇಲೇಕಿರಬೇಕು? ಅದರ

ಬಾಗಿಲಲ್ಲಿ ಕ್ಯೂ ನಿಂತವರಲ್ಲಿ ಕಾಲೇಜಿನ ಹಳೆಯ ಕಾಲದ ಸ್ನೇಹಿತರು ನಮ್ಮನ್ನೇಕೆ ಗುರುತಿಸಿ ತಡೆದು ನಿಲ್ಲಿಸಬೇಕು? ನಮಗೆ ಅವರೂರಲ್ಲಿ ನೂರಾರು ಉಪಚಾರ ಮಾಡಿದ್ದವರಿಗೆ ನಾವು ಪ್ರತ್ಯುಪಚಾರ ಮಾಡುವುದು ಸರಿಯೇ? ನಾವು ಅವರಿಗೆ ಕೊಡಿಸದಾದರೆ ಹೋಗಲಿ, ಅವರು ಒತ್ತಾಯಮಾಡಿ ನಮ್ಮನ್ನು ಒಳಕ್ಕೆ ಕರೆದರೆ ಬರುವುದಿಲ್ಲವೆಂದು ಬರ್ಬರತೆ ತೋರಿಸುವದಕ್ಕಾಗುತ್ತದೆಯೇ? ಒಳಗೆ ಹೋದ ಮೇಲೆ ನಮಗೆ ಬೇಡವೆಂದರೂ ಅವರು ಮಾಡಿದ ದೋಸೆಯನ್ನು ತಿನ್ನದಿರುವುದೇ? ಚೆನ್ನಾಗಿದ್ದ ಅದರ ರುಚಿಯನ್ನು ಅಲ್ಲಗಳೆಯುವುದು ತರವೆ? ಸಂದರ್ಭಗಳು ಹೀಗೆ ಬೀರಿ ನಮ್ಮನ್ನು ದುರ್ಬಲಗೊಳಿಸಿದರೆ–ನಮ್ಮನ್ನು ಸೋಲಿಸಿದರೆ, ನಮ್ಮ ಸ್ವತಂತ್ರವನ್ನು ಬಿಗಿದರೆ ನಾವು ಚಂಡಿಸುವುದು ನಾಗರಿಕವಾದೀತೆ? ಸರಿಯಾಗಿ ಇಲ್ಲಿ ಊಟ ಮಾಡುವ ಹಾಗಿರಲಿಲ್ಲವಾಗಿ ಬಂದು ಬೀರಿತ್ತು ಆಕ್ಷೇಪಣೆ. ಮಾಡುವುದೇನು? ಬಾಯ ಮಾತು ಕಟ್ಟಿತು.

ಒಂದು ಸಂಗತಿಯಂತೂ ತಥ್ಯ: ಬೇಸರವಾದಾಗ, ಯಾವುದಾದರೂ ಚಿಂತೆ ಕಾಡುವಾಗ, ಅದರಿಂದ ಪಾರಾದ ಹೊರತು ಬದುಕು ದುರ್ಭರವಾದಾಗ ಆ ಸ್ಥಿತಿಯಿಂದ ಮನಸ್ಸು ಕೆಡುವಂತಿದ್ದರೆ, ವಿಷಮಗೊಳ್ಳುವ ಹಾಗಿದ್ದರೆ ಪಾನವಲ್ಲ ಅಫೀಮವಲ್ಲ ಮದ್ದು. ಸಂಗೀತವಲ್ಲ, ನಾಟ್ಯವೂ ಅಲ್ಲ, ಸ್ನೇಹವಲ್ಲ, ಇನಿಯಳ ಲಲ್ಲೆಯಲ್ಲ ಚಿಕಿತ್ಸೆ. ನನ್ನ ಸಿದ್ಧಾಂತ ಇದು. ಬಹುದಿನದ ಅನುಭವದಿಂದ ಸ್ಥಿರಗೊಂಡದ್ದು. ಅಂಥ ಸಂದರ್ಭಗಳಲ್ಲಿ ಎರಡನೆಯ ಯೋಚನೆ ಮಾಡದೆ ಬಲವಾಗಿ ಒಂದನ್ನು ಹಾಕಿಬಿಡಿ. ತಲೆಯ ರಕ್ತ ಒಡನೆಯೇ ಹೊಟ್ಟೆಗೆ ಇಳಿಯುವುದು. ಹಲವು ಗಂಟೆಗಳ ಕಾಲ, ನಿಮಗೆ ಪುಣ್ಯವಿದ್ದರೆ ಒಂದೆರಡು ದಿನಗಳ ಕಾಲ, ತನ್ನ ಕಡೆಗೇ ತನ್ನ ಪರಿಣಾಮಗಳ ಕಡೆಗೆ ನಿಮ್ಮ ದೇಹವನ್ನೂ ಮನಸ್ಸನ್ನೂ ಸರ್ವ ವ್ಯಾಪಾರಗಳನ್ನೂ ಸೆಳೆದು ಹಿಡಿದು ಬಿಡುತ್ತದೆ. ಅದರ ಮುಂದೆ ಯಾವ ಚಿಂತೆ ನಿಂತೀತು? ಅಂತಹ ಚಿಂತಾಮಣಿ ಕೈಯಲ್ಲಿರುವಾಗ, ರಸ್ತೆ ರಸ್ತೆಗೂ ಸಂಸ್ಥೆ, ಸಾಮಗ್ರಿ ಇರುವ ಜನತೆಗೆ ಯಾವ ಮನೋರೋಗ ಬಂದೀತು? ಯಾವ ಬಯಕೆ ಬೇನೆ ಉಂಟಾದಾವು?.

* * *



**ಲೇಖಕರ ಪರಿಚಯ :**

ವೀ.ಸೀ. (೧೮೯೯–೧೯೮೩) ಎಂದೇ ಖ್ಯಾತರಾದ ವೀ. ಸೀತಾರಾಮಯ್ಯನವರು (ವೆಂಕಟರಾಮಯ್ಯ ಸೀತಾರಾಮಯ್ಯ) ಬೆಂಗಳೂರು ಜಿಲ್ಲೆಯ ಬೂದಿಗೆರೆ ಗ್ರಾಮದಲ್ಲಿ ೨ನೆಯ ಅಕ್ಟೋಬರ್ ೧೮೯೯ರಲ್ಲಿ ಜನಿಸಿದರು. ತಂದೆ ವೆಂಕಟರಾಮಯ್ಯ, ತಾಯಿ ದೊಡ್ಡ ವೆಂಕಟಮ್ಮ, ಪ್ರಾಥಮಿಕ ಮತ್ತು ಮಾಧ್ಯಮಿಕ ಶಿಕ್ಷಣವನ್ನು ಬೆಂಗಳೂರಿನ ಚಾಮರಾಜಪೇಟೆಯ ಮುನಿಸಿಪಲ್ ಪ್ರಾಥಮಿಕ ಶಾಲೆ ಮತ್ತು ಕೋಟೆಯ ಎ.ವಿ. ಸ್ಕೂಲ್ ಮತ್ತು ಸರ್ಕಾರಿ ಪ್ರೌಢಶಾಲೆಯಲ್ಲಿ ನಡೆಯಿತು. ಮೈಸೂರು ಮಹಾರಾಜ ಕಾಲೇಜಿನಲ್ಲಿ ೧೯೨೦ರಲ್ಲಿ ಬಿ.ಎ. ಪದವಿಯನ್ನು ಸರ್ ಶೇಷಾದ್ರಿ ಬಂಗಾರದ ಪದಕದೊಂದಿಗೆ ಪಡೆದರು. ಸ್ನಾತಕೋತ್ತರ ಶಿಕ್ಷಣವನ್ನು ಮಹಾರಾಜ ಕಾಲೇಜು ಮೈಸೂರು ಮತ್ತು ೧೯೨೨ರಲ್ಲಿ ಎಂ.ಎ. ಪದವಿಯನ್ನು ಪಡೆದರು.

ಕವನ ಸಂಗ್ರಹಗಳು : ದೀಪಗಳು, ಗೀತಗಳು, ನೆಳಲು–ಬೆಳಕು, ದ್ರಾಕ್ಷಿ ದಾಳಿಂಬೆ, ಹೆಜ್ಜೆಪಾಡು, ಅರಲು–ಬರಲು (ಈ ಕೃತಿಗೆ ೧೯೭೩ರಲ್ಲಿ ಕೇಂದ್ರ ಸಾಹಿತ್ಯ ಅಕಾದೆಮಿ ಪ್ರಶಸ್ತಿ ಲಭಿಸಿದೆ.) ನಾಟಕ: ಬೆಳದಿಂಗಳು, ಸೀಕರಣೆ ಗದ್ಯ ಕೃತಿಗಳು: ಆಗ್ರಹ, ಪಂಪಾಯಾತ್ರೆ, ಹಣ ಪ್ರಪಂಚ, ಕರ್ನಾಟಕ ಕಾದಂಬರಿ, ಭಾರತಗಳ ಶ್ರೀಕೃಷ್ಣ, ಸೊಹ್ರಾಬ್–ರುಸ್ತುಂ, ಶ್ರೀಶೈಲ ಶಿಖರ (ಈ ನಾಟಕವು ಪಾಪ ಪುಣ್ಯ ಹೆಸರಿನ ಚಲನಚಿತ್ರವಾಗಿದೆ). ಸೃಜನಾತ್ಮಕ ರಚನೆಗಳು: ಮಹನೀಯರು, ಕಾಲೇಜು ದಿನಗಳು, ಅಶ್ವತ್ಥಾಮನ್, ವಿಮರ್ಶೆ: ಕವಿಕಾವ್ಯ ದೃಷ್ಟಿ, ಅಭಿಜ್ಞಾನ ಶಾಕುಂತಲ ಅರ್ಥ ಮೌಲ್ಯ (ಐ.ಎ. ರಿಚರ್ಡ್ಸ್ ಕೃತಿ) ಸಾಹಿತ್ಯಾವಲೋಕನ, ಕಲಾನುಭವ (ವಿ.ಸಿಯವರ ಉಪನ್ಯಾಸಗಳ ಸಂಗ್ರಹ). ಅನುವಾದಿತ ಕೃತಿಗಳು: ಪಿಗ್ಮ್ಯಾಲಿಯನ್, ಮೇಜರ್ ಬಾರ್ಬರ, ಬಂಗಾಳಿ ಸಾಹಿತ್ಯ ಚರಿತ್ರೆ. ಸಂಪಾದಿತ ಕೃತಿಗಳು: ಕವಿರಾಜಮಾರ್ಗ, ವಡ್ಡಾರಾಧನೆ, ವ್ಯಾಕರಣಗಳು, ಯಕ್ಷಗಾನ, ಜನಪದ ಸಾಹಿತ್ಯ. ಸುಮಾರು ಅರವತ್ತು ಕೃತಿಗಳನ್ನು ರಚಿಸಿದ್ದಾರೆ.

ಇವರಿಗೆ ಕರ್ನಾಟಕ ಸಾಹಿತ್ಯ ಅಕಾದೆಮಿ ಪ್ರಶಸ್ತಿ, ಕೇಂದ್ರ ಸಾಹಿತ್ಯ ಅಕಾದೆಮಿ ಪ್ರಶಸ್ತಿ, ಕುಮಾರವ್ಯಾಸ ಪ್ರಶಸ್ತಿ, ಮೈಸೂರು ವಿಶ್ವವಿದ್ಯಾನಿಲಯದಿಂದ ಡಿ.ಲಿಟ್.ಪದವಿ ಪಡೆದಿದ್ದಾರೆ. ೧೯೫೪ರಲ್ಲಿ ಕುಮಟಾದಲ್ಲಿ ಜರುಗಿದ ೩೬ನೆಯ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಸರ್ವಾಧ್ಯಕ್ಷರಾಗಿದ್ದರು.

ವೀ.ಸಿ. ಅವರು ಉಪನ್ಯಾಸಕರಾಗಿ, ಪ್ರಾಚಾರ್ಯರಾಗಿ, ಕಾರ್ಯನಿರ್ವ ಹಿಸಿದ್ದಾರೆ. ಶಾರದಾ ವಿಲಾಸ ಹೈಸ್ಕೂಲು ಮೈಸೂರು ಮತ್ತು ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಸೇವೆ ಸಲ್ಲಿಸಿದ್ದಾರೆ. ಈ ಪ್ರಬಂಧವನ್ನು ಜಿ.ಎಸ್. ಆಮೂರ ಅವರು ಸಂಪಾದಿಸಿದ ವೀ.ಸಿ.ಯವರ ಬೆಲೆ ಬಾಳುವ ಬರಹಗಳು ಎನ್ನುವ ಕೃತಿಯಿಂದ ಆಯ್ದುಕೊಳ್ಳಲಾಗಿದೆ.

**ಲೇಖನದ ಆಶಯ :**

ದೋಸೆ ಪ್ರಬಂಧವು ಒಂದು ವಿಶಿಷ್ಟವಾದ ಬರಹ. ಇದು ಹರಟೆಯ ರೂಪದಲ್ಲಿ ಓದುಗನನ್ನು ಸೆಳೆಯುತ್ತದೆ. ದೋಸೆಯ ಬಗ್ಗೆ ಎರಡು-ಮೂರು ವಿಧಗಳ ಬಗ್ಗೆ ಮಾಹಿತಿ ಇದ್ದವರಿಗೆ ಈ ಪ್ರಬಂಧದಲ್ಲಿ ಕಾಣಿಸುವ ದೋಸೆಗಳ ವೈವಿಧ್ಯತೆ ಆಶ್ಚರ್ಯವೆನಿಸಬಹುದು. ಊಟ ಬಲ್ಲವನಿಗೆ ರೋಗವಿಲ್ಲ ಎಂಬ ಮಾತು ಜನಜನಿತವಾದರೂ ಆಹಾರದಲ್ಲಿ ಎಂತಹ ಆಹಾರ ಸೇವಿಸಿದರೆ ಆರೋಗ್ಯಕ್ಕೂ ಹಿತ ಮತ್ತು ಬಾಯಿ ರುಚಿಗೂ ಸುಖವೆಂದು ಇಂದು ಆಲೋಚಿಸಬೇಕಾಗಿದೆ. ಇಂದು ಫಾಸ್ಟ್ ಫುಡ್ ಕಾಲವಾದ್ದರಿಂದ ವೀಸೀ.ಅವರ ದೋಸೆ ಹರಟೆಯು ಹೊಸದೊಂದು ಲೋಕವನ್ನು ಪರಿಚಯಿಸುತ್ತದೆ.

■■



ಘಟಕ-೪

# ಬಹುಶಿಸ್ತೀಯ ಅರಿವು

# ೧೦. ಲಂಕೇಶರ ಸಂಕ್ರಾಂತಿ : ವಿಮರ್ಶೆಯ ಮುಖ್ಯ ನೆಲೆಗಳು



**ಡಾ. ಚಿಕ್ಕಮಗಳೂರು ಗಣೇಶ**

**ಸೂಚನೆ :**

*('ಸಂಕ್ರಾಂತಿ' ನಾಟಕದ ಕತೆ, ಸಂಭಾಷಣೆ, ಪಾತ್ರಗಳು ಹಾಗೂ ವೈಚಾರಿಕತೆಗಳನ್ನು ಅನುಲಕ್ಷಿಸುವುದು.)*

**ಪೀಠಿಕೆ:** ಶರಣ–ಶರಣೆಯರು ಕೂಡಿ ಮುನ್ನಡೆಸಿದಚಳವಳಿಯು ಕನ್ನಡ ನೆಲದ ಮೊಟ್ಟಮೊದಲ ಸಾಮೂಹಿಕ ಹೋರಾಟವಾಗಿ ಗಮನ ಸೆಳೆಯುತ್ತದೆ.ಈ ಚಳವಳಿಯು ಸರ್ವ ಸಮಾನತೆಯನ್ನು ತನ್ನ ಮೂಲ ಗುರಿಯನ್ನಾಗಿಸಿಕೊಂಡಿತ್ತು. ಹಾಗೆ ನೋಡಿದರೆ, ಸಮಾಜದ ಕೇಂದ್ರವಾಗಿ ಬದುಕುತ್ತಿದ್ದ ಮನುಷ್ಯರು ನಾನಾ ವೈರುಧ್ಯಗಳನ್ನು ಕಲ್ಪಿಸಿಕೊಂಡು ಪರಸ್ಪರ ದೂರ ಉಳಿಯತೊಡಗಿದ ಕ್ಷಣದಿಂದಲೇ ಇಂತಹ ಚಳವಳಿಗೆ ನೆಲವು ಸಿದ್ಧವಾಯಿತು ಎನ್ನಬಹುದು. ಕನ್ನಡ ನಾಡಿನ ಪಾಲಿಗೆ ಮೊದಲಿಗೆ ಸಮಾನತೆಯ ಭಾವ ಹೆಪ್ಪುಗಟ್ಟಿದಂತೆ ಕಂಡಿದ್ದು ಈ ಸಂದರ್ಭದಲ್ಲೆ ಎಂದು ಚರಿತ್ರೆ ಹೇಳುತ್ತದೆ. ಈ ಚಳವಳಿಯ ಮುಂದಾಳತ್ವ ವಹಿಸಿದ್ದ ಶರಣ ಸಮೂಹದ ಮುಖ್ಯ ಕಾಳಜಿ ಮನುಷ್ಯರನ್ನು ಕುರಿತದ್ದಾಗಿತ್ತು. ಇದನ್ನು ಈಗಲೂ ನಾವು ಆ ಕಾಲದ ಪ್ರತ್ಯಕ್ಷ ಸಾಕ್ಷಿಗಳಾದ ವಚನಗಳ ಅಂತರಂಗದಿಂದ ಅರಿಯಬಹುದು. ದಯವನ್ನು ಧರ್ಮದ ಮೂಲ ದ್ರವ್ಯವಾಗಿ ಇಟ್ಟುಕೊಂಡು ಮನುಷ್ಯರನ್ನು ಒಟ್ಟುಗೂಡಿಸುತ್ತಲೇ ಒಂದು ನಿರ್ಭೀತ ಜೀವ ಪರಿಸರವನ್ನು ಕಟ್ಟುವ ಕನಸನ್ನು ನಮ್ಮ ಹೆಮ್ಮೆಯ ಶರಣರು ಕಂಡಿದ್ದರು.

'ಧರ್ಮ' ಎನ್ನುವುದು ಮೂಲತಃ ಜೀವ ಲೋಕಕ್ಕೆ ಕಲ್ಯಾಣವನ್ನು ಕೋರುವ ಪ್ರೇರಕ ಶಕ್ತಿ. ಅದು ಬಸವಳಿದ ಜೀವಗಳ ಕಷ್ಟ ಸುಖಗಳನ್ನು ಹಂಚಿಕೊಳ್ಳುವ, ಪರಿಹರಿಸುವ ಮಾಧ್ಯಮವಾಗಿರುತ್ತದೆ. ಧರ್ಮವು ಯಾವತ್ತೂ ಸಂಬಂಧಗಳನ್ನು

ಬೆಸೆಯುವ ಕೊಂಡಿಯಂತಿರಬೇಕೇ ಹೊರತು ಅದನ್ನು ಕಡಿದೊಗೆಯುವ ಕೊಡಲಿಯಾಗಬಾರದು. ಆದರೆ, ಇತ್ತೀಚೆಗೆ ಧರ್ಮದ ಬೆಳಕು ಬೆಂಕಿಯಾಗಿ ಆವರಿಸುತ್ತ ಜೀವಗಳನ್ನು ಸುಡುತ್ತಿರುವುದು ವಿಪರ್ಯಾಸ. ನಮಗೆ ಲೋಕದ ಚರಿತ್ರೆಯು ಹೇಳಿಕೊಡುವ ಪಾಠದ ಅನುಭವದಿಂದ ಹೇಳುವುದಾದರೆ: ಯಾವುದೇ ಧರ್ಮದ ಗುರಿ ಒಂದೇ ಆದರೂ ಅದರ ಅನುಸರಣೆಯ ದಾರಿಯಲ್ಲಿ ಎರಡು ಬೇರೆಯದೇ ಆದ ದಾರಿಗಳಿರುತ್ತವೆ. ಒಂದು, ಜೀವಗಳ ಸ್ವತಂತ್ರ ವಿಕಾಸಕ್ಕೆ ಅನುಕ್ಷಣವು ಸಹಕರಿಸುವ ಮುಕ್ತಮಾರ್ಗ; ಇನ್ನೊಂದು, ಆ ಬೆಳವಣಿಗೆಗೆ ಹೇಗಾದರೂ ಸಂಚಕಾರ ತಂದೊಡ್ಡುವ ಉನ್ಮತ್ತ ಮಾರ್ಗ. ಇವುಗಳಲ್ಲಿ ಒಂದು ಧರ್ಮದ ಶುಭ್ರ ಸ್ಥಿತಿ, ಇನ್ನೊಂದು ವಾಸಿ ಮಾಡಲು ಕಷ್ಟ ಸಾಧ್ಯವೆನಿಸುವ ರೋಗ ಗ್ರಸ್ಥ ಸ್ಥಿತಿ. ಯಾವಾಗ ಧರ್ಮವು ಹೀಗೆ ರೋಗ ಗ್ರಸ್ಥ ಸ್ಥಿತಿಯನ್ನು ತಲುಪಿ ಸಮಾಜವನ್ನು ಆವರಿಸಿಕೊಳ್ಳಲು ತೊಡಗುವುದೋ, ಆಗ ಅಲ್ಲೆಲ್ಲ ಅನಿವಾರ್ಯ ಎಂಬಂತೆ ಜನ ಚಳವಳಿಯ ಮಿಂಚುಗಳು ಜೀವ ತಳೆಯುತ್ತವೆ.

ಹನ್ನೆರಡನೆಯ ಶತಮಾನದಲ್ಲಿ ಆದದ್ದೂ ಇಷ್ಟೆ: ಇಂದಿನಂತೆಯೇ ಬಂಡವಾಳಶಾಹಿಗಳು ಮತ್ತು ಧರ್ಮಾಧಿಕಾರಿಗಳು ಪ್ರಭುತ್ವದ ಮೇಲೆ ಇನ್ನಿಲ್ಲದಷ್ಟು ಅಧಿಕಾರ ಸ್ಥಾಪಿಸಿಕೊಂಡಿದ್ದರು. ರಾಜ, ಪುರೋಹಿತ, ಹಾಗೂ ವ್ಯಾಪಾರಿಗಳು ವಿಶೇಷಾಧಿಕಾರ ಹೊಂದಿ ಮೆರೆಯುತ್ತಿದ್ದರು. ಅಲ್ಲದೆ, ಧರ್ಮ ಮತ್ತು ಸಂಪತ್ತಿನ ಕೇಂದ್ರೀಕರಣದಿಂದಾಗಿ ಸಮಾಜದೊಳಗೆ ಸ್ಪಷ್ಟವಾಗಿ ಎರಡು ವರ್ಗಗಳು ರೂಪುಗೊಂಡವು. ದುಡಿಯುವ ವರ್ಗ ದುಡಿಯುತ್ತಲೇ ಇರುವುದು, ಇನ್ನೊಂದು ವರ್ಗ ಅದರ ಫಲವನ್ನು ಕೂತುಣ್ಣುತ್ತ ಕೊಬ್ಬುತ್ತಲೇ ಹೋದುದು. ಇದರೊಂದಿಗೆ, ಮನುಷ್ಯರನ್ನು ‘ಮುಟ್ಟಿಸಿಕೊಳ್ಳುವ’ ಮತ್ತು ‘ಮುಟ್ಟಿಸಿಕೊಳ್ಳದ’ ಎಂಬ ದ್ವೈತಭಾವದ ದೃಷ್ಟಿಕೋನ ಇದ್ದೇ ಇತ್ತು. ಅದು ಸಮಾಜದ ತೀವ್ರತರ ಏರುಪೇರಿಗೆ ಮೂಲ ಕಾರಣವಾಯಿತು. ಸಮಾನತೆಯ ಮಾತಂತಿರಲಿ, ಇಲ್ಲಿನ ಯಜಮಾನ್ಯ ವ್ಯವಸ್ಥೆ ದೇವರು–ಧರ್ಮವನ್ನು ದಾಳವಾಗಿಟ್ಟುಕೊಂಡು ದುಡಿಯುವ ವರ್ಗದ ದೇಹ–ಮನಸ್ಸುಗಳನ್ನು ತಮ್ಮಿಚ್ಛೆಗೆ ತಕ್ಕಂತೆ ಬಳಸತೊಡಗಿತು. ರಾಜ ಶಾಸನಗಳು, ಧರ್ಮ ಗ್ರಂಥಗಳು, ದೇವಾಲಯಗಳು ಇಂಥವರ ಅಧಿಕಾರವನ್ನು ಮೆರೆಸುವ ಅಟ್ಟಹಾಸದ ಗದ್ದುಗೆಗಳಾದವು. ಇದರ ಪರಿಣಾಮವಾಗಿ ಮನುಷ್ಯರು ಪ್ರಾಣಿಗಳಿಗಿಂತ ಕಡೆಯಾಗಿ ಜೀವನ ನಡೆಸುವ ದುರ್ಭರ ಸ್ಥಿತಿಗೆ ಅನಿವಾರ್ಯವಾಗಿ ತಲುಪಿದರು.

ಇಂತಹ ಕಡುಕಷ್ಟದ ಕಾಲದಲ್ಲಿ ಮಾನವೀಯ ಚಿಂತನೆಯ ಸಮಾನ



ಮನಸ್ಸುಗಳು ಒಂದಾಗಿ ಸೇರಿದವು. ಅವರಲ್ಲಿ ಮುಖ್ಯರಾದವರೆಂದರೆ, ಆ ಕಾಲದ ದುಡಿಯುವ ವರ್ಗವಾದ ಕುಶಲ ಕರ್ಮಿ ಕಾಯಕ ಜೀವಿಗಳು. ಇವರು ತಮ್ಮನ್ನು ದೂರವಿಟ್ಟ ವ್ಯವಸ್ಥೆ ವಿರುದ್ಧ ಕಟ್ಟಿದ ಚಳವಳಿಯೇ ಶರಣರ ಚಳವಳಿ. ಇದನ್ನು ‘ಕಾಯಕಜೀವಿಗಳ ಚಳವಳಿ’ ಎಂದೇ ಕರೆದಿರುವ ಡಾ.ಸಿ.ವೀರಣ್ಣ ಅವರು, “ರಾಜನ ತೆರಿಗೆಗಳಿಂದ, ಮಠ–ದೇವಾಲಯಗಳ ಸುಲಿಗೆಗಳಿಂದ, ವರ್ತಕರ ಕಪಿ ಮುಷ್ಠಿಗಳಿಂದ ತಪ್ಪಿಸಿಕೊಳ್ಳುವ ಕಾತುರ ಮೊದಲು ಕಾಣಿಸಿದ್ದು ಕಾಯಕ ಜೀವಿಗಳಲ್ಲಿ” ಎನ್ನುತ್ತಾರೆ(ಪುಟ.೨೫). ಆದರೆ ಈ ಚಳವಳಿ ಅಷ್ಟಕ್ಕೇ ನಿಲ್ಲದೆ ವ್ಯಾಪಕಗೊಂಡು ಅಸಂಖ್ಯಾತ ಜೀವಕೋಟಿಯ ಆಶೋತ್ತರಗಳ ಪ್ರತಿಧ್ವನಿಯಾಗಿ ಪರಿಗಣಿಸಿತು. ವಿಶ್ವದ ಪ್ರಪ್ರಥಮ ಜನ ಸಂಸತ್ತನ್ನು (ಫಾಂಡಿಟಜ’ ಈಊಧಿಣ ಕಚಿಡಿಟುಚಿಟಜಟಣ) ಮಾದರಿಯಾಗಿ ರೂಪಿಸಿದ ಗೌರವಕ್ಕೆ ಪಾತ್ರವಾಯಿತು.

## ಹಿನ್ನೆಲೆ

ಶರಣ ಯುಗದ ಇಂತಹ ಚಿಂತನೆಗಳು ಬದಲಾದ ಹೊಸ ಕಾಲಘಟ್ಟದಲ್ಲಿ ಹಲವು ಸಂಕೀರ್ಣ ಸವಾಲುಗಳಿಗೆ ಉತ್ತರ ನೀಡುವ ಮಾಧ್ಯಮವಾಗಿ ಪರಿಣಮಿಸಿತು. ‘ನೋಯುವ ಹಲ್ಲಿಗೆ ನಾಲಿಗೆ ಮತ್ತೆ ಮತ್ತೆ ಹೊರಳುವಂತೆ’ ಶರಣ ಕ್ರಾಂತಿಯ ಕಡೆಗೆ ಕನ್ನಡದ ಸೂಕ್ಷ್ಮ ದೃಷ್ಟಿಗಳು ಹೊರಳಿದವು. ಕ್ರಾಂತಿಯ ಉತ್ಪನ್ನವಾದ ವಚನಗಳಲ್ಲಿ ವ್ಯಕ್ತಗೊಂಡ ಚಿಂತನೆಗಳು ಆಧುನಿಕ ಕಾವ್ಯ–ಕಾದಂಬರಿ–ನಾಟಕಗಳ ವಸ್ತುವಾಗಿ ಹೊರಹೊಮ್ಮಿತು. ಅಷ್ಟು ಮಾತ್ರವಲ್ಲ. ಕೆಲವು ಕಥನಗಳಂತೂ ಆ ಯುಗದ ಸಂದರ್ಭವನ್ನು ಪುನರ್ ಸೃಷ್ಟಿಸಿ ಮಂಡಿಸುವ ಪ್ರಯತ್ನ ಮಾಡಿದವು. ಪಿ. ಲಂಕೇಶರು ರಚಿಸಿದ ‘ಸಂಕ್ರಾಂತಿ’ ನಾಟಕವನ್ನು ಈ ಹಿನ್ನೆಲೆಯಲ್ಲಿ ವಿಶ್ಲೇಷಿಸಬಹುದು.

ಸಂಕ್ರಾಂತಿ, ೨೦ನೆಯ ಶತಮಾನದ ಕೊನೆಯ ಭಾಗದಲ್ಲಿ ರಚನೆಯಾದ ನಾಟಕ. ಕಥಾವಸ್ತು ಶರಣ ಚಳವಳಿಯಿಂದ ಪ್ರೇರಣೆ ಪಡೆದಿದೆಯಾದರೂ ಸಂಪೂರ್ಣವಾಗಿ ಅದನ್ನು ಅವಲಂಬಿಸಿಲ್ಲ. ಸಂಶೋಧಕರ ಅಭಿಪ್ರಾಯದಂತೆ, ಶರಣ ಕ್ರಾಂತಿಯ ತಾರ್ಕಿಕ ಅಂತ್ಯವಾದುದು ಒಂದು ಮದುವೆಯಿಂದ. ಅದು ಸಮಗಾರ ಹರಳಯ್ಯನ ಮಗನಿಗೂ, ಹಾರುವ ಮಧುವರಸನ ಮಗಳಿಗೂ ನಡೆಯಿತೆನ್ನಲಾದ ಅಂತರಜಾತೀಯ ಮದುವೆ. ಚಳವಳಿಯನ್ನು ಮುನ್ನಡೆಸುತ್ತಿದ್ದ ಮುಂದಾಳುಗಳ ಉತ್ಸಾಹವು ಪ್ರಯೋಗಕ್ಕಿಳಿದು, ಈ ಅಂತರಜಾತೀಯ ಮದುವೆಯನ್ನು ನೆರವೇರಿಸಲು ಮುಂದಾಯಿತು. ಆದರೆ ಅದರಿಂದ ಉಂಟಾದ

ಪರಿಣಾಮ ಘೋರವಾದುದು. ಶತಮಾನಗಳ ವರ್ಣಾಶ್ರಮದ ಬೇರಿಗೆ ಕೊಡಲಿ ಪೆಟ್ಟು ಕೊಟ್ಟ ಅಂತರಜಾತೀಯ ಮದುವೆಯಿಂದಾಗಿ ಶರಣರು ದೊಡ್ಡ ಬೆಲೆಯನ್ನೇ ತೆರಬೇಕಾಯಿತು. ಈ ವರ್ಣಸಂಕರದ ಪ್ರಯತ್ನವನ್ನು ಅಪರಾಧವೆಂದು ಪರಿಗಣಿಸಿದ ಪ್ರಭುತ್ವ ಕ್ರಾಂತಿಯನ್ನು ಹತ್ತಿಕ್ಕಲು ಮುಂದಾಯಿತು. ಇದರಲ್ಲಿ ಪಾಲುಗೊಂಡವರಿಗೆ ಶಿಕ್ಷೆಯಾಗಿ ಕಣ್ಣುಗಳನ್ನು ಕಿತ್ತದ್ದು, ಕಲ್ಯಾಣ ಪಟ್ಟಣದ ಬೀದಿಗಳಲ್ಲಿ ಆನೆಗಳ ಕಾಲುಗಳಿಗೆ ಕಟ್ಟಿ ಎಳೆದಾಡಿಸಿದ್ದು, ಇದರಿಂದ ಕೆರಳಿದ ಶರಣರಲ್ಲಿ ಕೆಲವರು ದಂಗೆ ಕೈಗೊಂಡದ್ದು, ಪ್ರತಿಯಾಗಿ ಶರಣರ ಕೊಲೆಗೆ ಮುಂದಾದದ್ದು–ಹೀಗೆ ಜಗತ್ತಿನಲ್ಲಿ ಮಾನವತೆಯನ್ನು ಎತ್ತಿ ಹಿಡಿದ ಬಹುಜನ ಚಳವಳಿಯೊಂದು ರಕ್ತಪಾತದಲ್ಲಿ ದುರಂತ ಅಂತ್ಯ ಕಂಡಿತು.

ಆದರೆ, ಇದೊಂದನ್ನೂ ಪ್ರಸ್ತಾಪಿಸದೆ ಲಂಕೇಶರು ಸಂಕ್ರಾಂತಿಯನ್ನು ಸ್ವತಂತ್ರವಾಗಿ ಕಟ್ಟಿಕೊಟ್ಟಿದ್ದಾರೆ. ಹಾಗಾಗಿ ಇದು ಕೇವಲ ಹಿಂದೆ ಎಂದೋ ಸಂಭವಿಸಿದ ಘಟನೆಗಳಿಗೆ ಕನ್ನಡಿ ಹಿಡಿಯುವ ಐತಿಹಾಸಿಕ ನಾಟಕವಲ್ಲ. ಯಾವ ಕಾಲದಲ್ಲಾದರೂ ನಮ್ಮಂತಹ ಸಮಾಜದಲ್ಲಿ ನಡೆಯುವ ದುರಂತಗಳನ್ನು ಚಿತ್ರಿಸುವ ಸಾಮಾಜಿಕ ನಾಟಕವಾಗಿದೆ. ಆದ್ದರಿಂದ ನಾವು "ಐತಿಹಾಸಿಕ ಸತ್ಯದ ದುರಂತ ಧ್ವನಿಯನ್ನು ಮಾತ್ರ ಸ್ವೀಕರಿಸಿ ವರ್ತಮಾನದ ಬೆಳಕಿನಲ್ಲಿ ಅದನ್ನು ಶೋಧಿಸುವ ಒಂದು ಅಭೂತಪೂರ್ವ ಪ್ರಯತ್ನವನ್ನಾಗಿ 'ಸಂಕ್ರಾಂತಿ'ಯನ್ನು ಚರ್ಚಿಸಬೇಕಾಗುತ್ತದೆ. ಬಸವಣ್ಣ, ಬಿಜ್ಜಳರನ್ನು ಹೊರತು ಪಡಿಸಿದರೆ ಉಳಿದೆಲ್ಲ ಪಾತ್ರಗಳ ಹೆಸರೂ ಬದಲಾಗಿದೆ, ಎಂಬುದರಿಂದ ನಾಟಕಕಾರರು ಚಾರಿತ್ರಿಕ ಸಂಗತಿ ಸತ್ಯಗಳನ್ನು ಗೌಣವಾಗಿಸಿರುವುದು ಸ್ಪಷ್ಟವಾಗುತ್ತದೆ"(ಕೆ.ಮರುಳಸಿದ್ದಪ್ಪ).

**ಪ್ರವೇಶ**

ಸಂಕ್ರಾಂತಿ ಐದು ದೃಶ್ಯಗಳ ನಾಟಕ. ಇದು ಹೊಲೆಯರ ಹಟ್ಟಿಯಿಂದ ಆರಂಭವಾಗಿ ಹೊಲೆಯರ ಹಟ್ಟಿಯ ಮೂಲಕವೇ ಕೊನೆಯಾಗುತ್ತದೆ. ಇದು ಸಾಂಕೇತಿಕವಾಗಿದ್ದು, ತಳಲೋಕದ ಸಂಘರ್ಷಮಯ ಸಹಜ ಬದುಕನ್ನು ಅನಾವರಣ ಮಾಡುವ ಉದ್ದೇಶದಿಂದ ಮುಂಜಿಗಿಯುತ್ತದೆ. ದಲಿತರ ಕಡು ಕಷ್ಟದ ಬದುಕು, ಅದರಿಂದ ಉದ್ಭವಿಸುವ ಮಾನಸಿಕ ಜರ್ಜರಿತ, ಅದನ್ನು ಮರೆಯಲು ಹೆಂಡದ ಮೊರೆಹೋಗುವ ಅನಿವಾರ್ಯತೆ, ಹೆಂಡ–ಖಂಡಗಳ ಸಾಂಗತ್ಯದಲ್ಲಿ ಗರಿಗೆದರುವ ಹಾಡು–ಪಾಡುಗಳು ನಾಟಕದ ದೃಶ್ಯಗಳನ್ನು ಸೃಜನಶೀಲವಾಗಿಸಿವೆ. ನಾಟಕದಲ್ಲಿ ದಲಿತ ಜಗತ್ತಿನ ತಾಕಲಾಟವನ್ನು, ಅನ್ನಪಾನೀಯವನ್ನು, ಹಾಡು ಕುಣಿತಗಳ ತನ್ಮಯತೆಯನ್ನು ಚಿತ್ರಿಸುವಾಗ ಲೇಖಕರು ಮೈದುಂಬುತ್ತಾರೆ. ಈ ನೆಲದ ದುಡಿವ



ವರ್ಗ ಕಟ್ಟಿರುವ ಭಾಷೆಯ ಕೆನೆಪದರವು ಕತೆ–ಗೀತೆಗಳ ರೂಪ ತಳೆದು ನಾಟಕವನ್ನು ವಿಸ್ತರಿಸುತ್ತದೆ.

ಉಳಿದ ಮೂರು ದೃಶ್ಯಗಳಲ್ಲಿ ನಾಟಕವು ನಿಧಾನಗತಿಯಲ್ಲಿ ಚಲಿಸುತ್ತಾ ದುರಂತದ ಕಡೆಗೆ ಸಾಗುತ್ತದೆ. ಇದರಲ್ಲಿ ಎರಡನೆಯ ದೃಶ್ಯವು ಉಷಾ–ರುದ್ರರ ಪ್ರೇಮ ಪ್ರಕರಣದ ಸುತ್ತ ಸುತ್ತುತ್ತದೆ. ಶಾಸ್ತ್ರಿಗಳ ಮಗಳು ಉಷಾ ಹೊಲೆಯರ ಉಜ್ಜನ ಮಗ ರುದ್ರನನ್ನು ಪ್ರೀತಿಸಿದ್ದಾಳೆ. ಇಂತಹ 'ವಿಲೋಮ' ಎಂದು ಸಮಾಜವು ಕರೆಯುವ ಸಂಬಂಧದ ಮೂಲಕ ಹುಟ್ಟುವ ವಯೋ ಸಹಜವಾದ ಪ್ರಭಾವಗಳನ್ನು ಮುಂದಿಡುತ್ತಾ ಹೋಗುತ್ತದೆ. ಆ ಸಂದರ್ಭದ ಕಲ್ಪನೆಗಳು, ಕನಸುಗಳು, ಸಲ್ಲಾಪಗಳು, ತರಲೆ–ಮುನಿಸುಗಳು ಉದ್ದಕ್ಕೂ ಓದುಗರನ್ನು ಒಂದು ನಿರ್ದಿಷ್ಟ ಉದ್ದೇಶದ ಕಡೆಗೆ ಸೆಳೆಯುವಂತೆ ಚಿತ್ರಿಸಲಾಗಿದೆ. ಹೀಗೆ ವಯೋಸಹಜ ಹುಡುಗಾಟಿಕೆಯಿಂದ ಶುರುವಾಗುವ ಪ್ರೇಮ ಪ್ರಕರಣವು ಗಂಭೀರವಾಗುತ್ತಾ ಸಾಗಿ, ಪ್ರಭುತ್ವವು 'ಅತ್ಯಾಚಾರ' ಎಂದು ಕರೆಯುವ ಹಂತಕ್ಕೆ ದೃಶ್ಯಾಂತ್ಯವು ಸಾಕ್ಷಿಯಾಗುತ್ತದೆ.

ಮೂರನೆಯ ದೃಶ್ಯದಲ್ಲಿ ಜಾತಿ–ಧರ್ಮದ ಸಲುವಾಗಿ ನಡೆಯುವ ಸಂಘರ್ಷವನ್ನು ವಿವರಿಸಲಾಗಿದೆ. ಸನಾತನ ಧರ್ಮದ ಪರವಾದಿಗಳ ಪ್ರತಿಭಟನೆ, ಕೀಳು–ಮೇಲಾಟಗಳ ಪೈಪೋಟಿ, ಶೂದ್ರ–ಬ್ರಾಹ್ಮಣರ ನಡುವೆ ಪರಸ್ಪರ ದೋಷಾರೋಪ ಬೆಳೆಯುತ್ತಾ ಹೋಗುತ್ತದೆ. ಪ್ರೇಮ ಪ್ರಕರಣವನ್ನು ಅತ್ಯಾಚಾರವೆಂದು ಬಿಂಬಿಸುವ ಆರಂಭಿಕ ಪ್ರಯತ್ನದಲ್ಲಿ ಯಶಸ್ಸು ಕಂಡವರ ಆರ್ಭಟ ಹೆಚ್ಚಾಗುತ್ತದೆ. ಸಂಘರ್ಷವು ಹೆಜೆ ಹೆಜ್ಜೆಗೆ ಬೆಳೆಯುತ್ತಾ, ದೃಶ್ಯವು ಅರಮನೆಯ ಕಡೆಯಿಂದ ಹೊರಟು ವಾತಾವರಣದಲ್ಲಿ ಹಿಂಸೆಯನ್ನು ಸ್ಥಾಪಿಸಿದವರೆಂಬ ಆರೋಪ ಹೊತ್ತ ದಲಿತರ ಕೇರಿಯ ಕಡೆಗೆ ಚಲಿಸುತ್ತದೆ.

ನಾಲ್ಕನೆಯ ದೃಶ್ಯವು ಗಂಭೀರವಾದುದು. ರಾಜಪ್ರಭುತ್ವ ಹಾಗೂ ಧರ್ಮ ಪ್ರಭುತ್ವದ ಮೈತ್ರಿಯನ್ನು ನಾವಿಲ್ಲಿ ಎದುರುಗೊಳ್ಳುತ್ತೇವೆ. ಧರ್ಮ ರಕ್ಷಣೆಯ ಹೆಸರಿನಲ್ಲಿ ಪುರೋಹಿತಶಾಹಿಯು ಸೃಷ್ಟಿಸುವ ಅವಾಂತರಗಳು ಹಾಗೂ ಅದರ ಹುನ್ನಾರಗಳಿಗೆ ಮನ್ನಣೆ ನೀಡುವ ಅಧಿಕಾರ ಕೇಂದ್ರದ ಭೋಳೆತನಗಳು ಓದುಗರನ್ನು ಎಚ್ಚರಗೊಳಿಸುತ್ತವೆ. ರಾಜನ ಅಧಿಕಾರ ಲಾಲಸೆ, ಸ್ತ್ರೀ ಲೋಲುಪತೆ, ಭಟ್ಟಂಗಿಗಳ ಹೊಗಳಿಕೆ, ಕಾಲ ಕಳೆಯಲು ಪ್ರಚೋದಿಸುವ ಕಥನ ಸೃಷ್ಟಿ, ಮರೆಮಾಚುತನ ತಂತ್ರಗಾರಿಕೆ ಇವೆಲ್ಲವುಗಳಿಂದ ದುರಂತವೊಂದು ಘಟಿಸಬಹುದೆಂಬ ಸುಳಿವು ನಮ್ಮೆದುರು ಅನಾವರಣಗೊಳ್ಳುತ್ತದೆ. ಈ ದೃಶ್ಯದ ಕೊನೆ ಕೊನೆಗೆ ಬಸವಣ್ಣ–

ಬಿಜ್ಜಳರ ಮುಖಾಮುಖಿ ಜರುಗುತ್ತದೆ. ಅದು ಇಡೀ ನಾಟಕದ ಉದ್ದೇಶದ ಹಿನ್ನೆಲೆಯಲ್ಲಿ ಪ್ರಮುಖವಾದುದು. ಇಲ್ಲಿ ಅವರಿಬ್ಬರ ನಡುವೆ ನಡೆವ ಸಂವಾದ ಆಶಯದ ದೃಷ್ಟಿಯಿಂದ ಅತ್ಯಂತ ಉತ್ಕರ್ಷ ಸ್ಥಿತಿಯನ್ನು ಮುಟ್ಟುತ್ತದೆ.

**ಅರ್ಥ ನಿರೂಪಣೆ**

'ಸಂಕ್ರಾಂತಿ' ಎಂದರೆ ಸಂಕ್ರಮಣ, ಚಲನೆ, ಪರಿವರ್ತನೆ ಅಥವಾ ಬದಲಾವಣೆ. ಇಲ್ಲಿಯೂ ಈ ನಾಟಕ ಪರಿವರ್ತನೆಯನ್ನು ತನ್ನ ಮೂಲ ಆಶಯವನ್ನಾಗಿ ಹೊಂದಿದೆ. ಪ್ರಕೃತಿ ಮತ್ತು ಅದರ ಭಾಗವಾದ ಸೂರ್ಯ ತನ್ನ ಪಥವನ್ನು ಬದಲಿಸುವ ಸಂದರ್ಭವನ್ನು ಸಂಕೇತಿಸುತ್ತಾ ನಾಟಕವನ್ನು ಕಟ್ಟಲಾಗಿದೆ. ಪ್ರಕೃತಿಯಲ್ಲಿರುವ ಜೀವಿಗಳ, ಮುಖ್ಯವಾಗಿ ಮನುಷ್ಯರ ಬದುಕು ಸಂಕ್ರಮಣಾವಸ್ಥೆಗೆ ರೂಪಕವಾಗಿದೆ. ಜೀವ ವಿಕಾಸದ ದಾರಿಯಲ್ಲಿ ಕಾಲ ಕಾಲಕ್ಕೆ ಮನುಷ್ಯರು ಒಂದು ಅವಸ್ಥೆಯಿಂದ ಇನ್ನೊಂದು ಅವಸ್ಥೆಗೆ ಹೊರಳಲು ನಿರಂತರ ಪ್ರಯತ್ನಿಸಿದ್ದಾರೆ. ಅದರಿಂದಲೇ ಆಧುನಿಕ ನಾಗರಿಕತೆಯ ಈ ಹಂತಕ್ಕೆ ಏರಿದ್ದಾರೆ. ಆದರೆ, ಪ್ರಕೃತಿಯಲ್ಲಿ ಜರುಗುವ ಪ್ರತಿಯೊಂದು ಸಂಕ್ರಾಂತಿಯೂ ಹಿಂಸೆಯ ಗರ್ಭದಿಂದಲೇ ರೂಪ ತಳೆದದ್ದಾಗಿದೆ. ಸ್ಥಿತಿ ಬದಲಾವಣೆಯ ಈ ಪ್ರಕ್ರಿಯೆ ಹಿಂಸಾತ್ಮಕವಾದುದು.

ಈ ನಾಟಕದಲ್ಲಿನ ಬಿಜ್ಜಳ, ಬಸವಣ್ಣ, ರುದ್ರ ಹಾಗೂ ಉಷಾ ನಾಲ್ವರೂ ಸಂಕ್ರಾಂತಿಯ ಕನಸಿನಲ್ಲಿದ್ದಾರೆ. ಆದರೆ ಪ್ರತಿಯೊಬ್ಬರ ಸಂಕ್ರಾಂತಿಯ ಪರಿಕಲ್ಪನೆಯೂ ಸೀಮಿತವಾದುದು; ಅವರವರ ಕಣ್ಣೋಟಕ್ಕೆ ಮಾತ್ರ ನಿಲುಕುವಂಥದು. ಬಿಜ್ಜಳ ತನ್ನ ಅಸ್ತಿತ್ವಕ್ಕೆ ಧಕ್ಕೆಯಾಗುವುದನ್ನು ತಡೆದು ಅಧಿಕಾರದಲ್ಲಿ ಮುನ್ನಡೆಯುವ ಬದಲಾವಣೆ ಬಯಸಿದರೆ, ಬಸವಣ್ಣ ಸಮಾಜದ ಅನಿಷ್ಟಗಳನ್ನು ಹೇಗಾದರೂ ಬದಲಾಯಿಸಲು ನಿಮಿತ್ತನಾಗಬೇಕೆಂಬ ಹಂಬಲದಲ್ಲಿದ್ದಾನೆ. ಹೊಲೇರುಜ್ಜನ ಮಗ ರುದ್ರ ಸಭ್ಯ ನಾಗರಿಕನಾಗುವ ಧಾವಂತದಲ್ಲಿ ನೆಲದ ಬೇರಿನಿಂದ ದೂರಾಗುತ್ತಿದ್ದರೆ, ಉಷಾ ತನ್ನ ಆಕಾಶಮುಖಿ ಬದುಕಿನ ಬೇರುಗಳನ್ನು ಕಡಿದುಕೊಂಡು ನೆಲದತ್ತ ಕೈಚಾಚುತ್ತಾ ಹೊರಡುತ್ತಾಳೆ. ಆದರೆ ಇವರೆಲ್ಲರ ಸಂಕ್ರಮಣದ ನಿರೀಕ್ಷೆ ಹಿಂಸೆಯಲ್ಲಿ ಪರ್ಯವಸಾನ ಆಗುವುದು ನಾಟಕ ಕಟ್ಟಿಕೊಡುವ ದುರಂತ.

**ವಿಮರ್ಶೆಯ ಮುಖ್ಯ ನೆಲೆಗಳು**

'ಸಂಕ್ರಾಂತಿ ನಾಟಕವು ಕಟ್ಟಿ ಕೊಡುವ ವಿಶಿಷ್ಟ ಸಂಗತಿಗಳನ್ನು ಐದು ಪ್ರಮುಖ ನೆಲೆಗಳ ಮೂಲಕ ವಿಶ್ಲೇಷಿಸಬಹುದು. ಅವುಗಳೆಂದರೆ: ೧. ಸಂಘರ್ಷದ ನೆಲೆ ೨. ಯಾಜಮಾನ್ಯದ ನೆಲೆ ೩. ವರ್ಣಸಂಕರದ ನೆಲೆ ೪. ಸ್ತ್ರೀ ಸಂವೇದನೆಯ



ನೆಲೆ ೫ ಸಾಂಸ್ಕೃತಿಕ ನೆಲೆ.

೧. ಸಂಘರ್ಷದ ನೆಲೆ: ನಾಟಕವು ಅನಾವರಣಗೊಳಿಸುವ ಮುಖ್ಯ ನೆಲೆಗಳಲ್ಲಿ ಸಂಘರ್ಷವು ಪ್ರಧಾನವಾದುದು. ನಾಟಕದೊಳಗೆ ಈಗಾಗಲೇ ಪುರೋಹಿತಶಾಹಿ ವೈದಿಕ ಬಣವು ಶರಣ ಸಮೂಹದ ಜೊತೆಗೆ ವಿರೋಧಿ ಮನಸ್ಥಿತಿಯನ್ನು ರೂಢಿಸಿಕೊಂಡಿದೆ. ಶರಣರು ಹಂತ ಹಂತವಾಗಿ ಸಮಾಜ ಬದಲಾವಣೆಗೆ ಮುಂದಾಗುತ್ತಿರುವ ವೇಗಕ್ಕೆ ಅವರು ಕಂಗಾಲಾಗಿದ್ದಾರೆ. ಉಚ್ಚ–ನೀಚ ತಾರತಮ್ಯದ ವಿರೋಧ, ದೇವಾಲಯಗಳ ಉಚ್ಚಾಟನೆ, ತಾವು ನಂಬಿ ಬಂದ ಪವಿತ್ರ ಗ್ರಂಥಗಳ ಕಡೆಗಣನೆ, ಬದುಕಿನ ಕ್ರಮ–ಆಚಾರಗಳ ಅವಹೇಳನ ಇಲ್ಲಿನ ವೈದಿಕರಲ್ಲಿ ತೀವ್ರ ಅಸಹನೆಯನ್ನು ಕೆರಳಿಸಿವೆ. ಅವೆಲ್ಲವೂ ಘನೀಭವಿಸಿದಂತೆ ದಲಿತ–ಬ್ರಾಹ್ಮಣ ವಿಲೋಮ ವಿವಾಹಕ್ಕೆ ತಯಾರಿ ನಡೆಸುತ್ತಿರುವುದು ಸಹಿಸಲಸಾಧ್ಯವಾದ ಮನಸ್ಥಿತಿಯನ್ನು ನಿರ್ಮಿಸಿದೆ. ಪರಿಣಾಮವೆಂಬಂತೆ ಪ್ರಬಲವರ್ಗದ ಜನರು ಬಸವಣ್ಣನ ನೇತೃತ್ವದ ಶರಣ ಗಣದ ವಿರುದ್ಧ ಪ್ರತಿಭಟನೆಯಲ್ಲಿ ತೊಡಗಿದ್ದಾರೆ.

ನಾಟಕದ ಮೂರನೆಯ ದೃಶ್ಯವು ವೈದಿಕರ ಇಂತಹ ಪ್ರತಿಭಟನೆ ಆರೋಪಗಳಿಂದ ತುಂಬಿಕೊಂಡಿದೆ.

"ಬ್ರಾಹ್ಮಣ ೩ : ಪ್ರಭುಗಳು ಮನ್ನಿಸಬೇಕು. ಪ್ರಮಾದವಾಗಿದೆ. ಸನಾತನ ಧರ್ಮಕ್ಕೆ ಕಳಂಕ ಬಂದಿದೆ.

ಬ್ರಾಹ್ಮಣ ೨ : ನಿತ್ಯ ನಮ್ಮ ದೇವಸ್ಥಾನಗಳ ಮೇಲೆ, ಸ್ನಾನ ಘಟ್ಟಗಳ ಮೇಲೆ ದಾಳಿಯಾಗುತ್ತಿದೆ.

ಬ್ರಾಹ್ಮಣ ೩ : ನಮ್ಮ ಆಚಾರ ವ್ಯವಹಾರಗಳ ಮೇಲೆ ಅತ್ಯಾಚಾರವಾಗುತ್ತಿದೆ" (ಪುಟ.೩೦).

ಯಾವುದೇ ಸಮಾಜದಲ್ಲಿ ಹೊಸ ಆಲೋಚನೆಗಳು ಆವರಿಸಿಕೊಳ್ಳುವಾಗ ಹಳೆಯದರ ಮನಸ್ಸನ್ನು ಘಾಸಿಗೊಳಿಸುವುದು ಸಹಜವಾದುದು. ಆದರೆ ಅದರ ಹಿನ್ನೆಲೆ ಅರಿತು ನ್ಯಾಯಾನ್ಯಾಯಗಳ ತೀರ್ಮಾನ ಮಾಡುವವರ ಪ್ರಜ್ಞೆ ದೊಡ್ಡದಿರಬೇಕು. ಇಲ್ಲಿ ಯಾವತ್ತಿನಿಂದಲೂ ಶೋಷಣೆಯಲ್ಲಿ ಜರ್ಜರಿತರಾದ ಶೂದ್ರರು ಇದೀಗ ಎಚ್ಚೆತ್ತುಕೊಳ್ಳುತ್ತಿದ್ದಾರೆ. ತಮ್ಮನ್ನು ಪ್ರಾಣಿಗಳಿಗಿಂತ ಕಡೆಯಾಗಿ ಕಂಡವರ ಮೇಲೆ ತಾತ್ವಿಕವಾಗಿ ಮತ್ತು ಭೌತಿಕವಾಗಿ ಮುಖಾಮುಖಿ ಮಾಡುತ್ತಿದ್ದಾರೆ. ಆದ್ದರಿಂದ ವೈದಿಕರ ಆರೋಪದಲ್ಲಿ ಸತ್ಯಾಂಶವಿಲ್ಲದಿಲ್ಲ. ಆದರೂ ಅವರು ಬಿಂಬಿಸುವ

ಪ್ರಮಾಣದಲ್ಲಿ ವ್ಯತ್ಯಾಸವಿದೆ. ಇಂತಹ ಕೆಲವರ ದುಡುಕನ್ನು ಗುರುತಿಸಿ ತಪ್ಪಿದ್ದರೆ ತಿದ್ದುವ ಪ್ರಜ್ಞೆ ಇರಬೇಕು; ಬದಲಾವಣೆಯ ಪರಿಣಾಮವನ್ನು ತಿಳಿದು ನಡೆಯುವ ತಾಳ್ಮೆ ಬೇಕಾಗಿದೆ. ನೊಂದವರ ನೋವನ್ನು ಅರಿಯುವ ತಾಯ್ತನ ಅವಶ್ಯವಾಗಿದೆ. ಕಾಯುವ ಸ್ಥಾನದಲ್ಲಿದ್ದು ತೀರ್ಪು ಕೊಡುವವರು ಮೈಯೆಲ್ಲಾ ಕಣ್ಣಾಗಿರಬೇಕಾಗುತ್ತದೆ. ಹಾಗಾಗಿ ಇಲ್ಲಿನ ಸಂಘರ್ಷಾತ್ಮಕ ಪ್ರತಿಭಟನೆಗಳು ಮಾನವತೆಯ ಆಯಾಮವನ್ನು ಮರೆತು ನಡೆದಿವೆ ಎನ್ನಬೇಕು.

ಈ ನಾಟಕದ ಯಶಸ್ಸು ಇರುವುದು ಇಲ್ಲೇ. “ಬದಲಾವಣೆಗೆ ನಾವು ಎಷ್ಟೇ ಆಸೆಪಟ್ಟರೂ ಅದು ಎಷ್ಟು ಕಷ್ಟವೆಂಬುದನ್ನು ತಿಳಿಸುವುದು. ಮತ್ತು ಹೀಗೇ ತಿಳಿಸುತ್ತಲೇ ಎಲ್ಲ ಕಾಲದಲ್ಲೂ ಬದಲಾವಣೆಯನ್ನು ಆಶಿಸುವ ಮನುಷ್ಯನ ತಹತಹವನ್ನು ಗುರುತಿಸಿರುವುದು. ಹಾಗೆ ಗುರುತಿಸಿಯೂ ಬದಲಾವಣೆಯ ಪ್ರಕ್ರಿಯೆಯಲ್ಲಿರುವ ಸಂಕೀರ್ಣತೆಗಳನ್ನು ಮರೆಮಾಚದೆ ಇರುವುದು, ಅದನ್ನು ಕೃತಿಯೊಳಗೆ ಧೈರ್ಯವಾಗಿ ಎದುರಿಸಿರುವುದು” (ಕೆ. ಸತ್ಯನಾರಾಯಣ).

೨.ಯಾಜಮಾನ್ಯದ ನೆಲೆ: ನಾಟಕದಲ್ಲಿ ಯಾಜಮಾನ್ಯವು ಎರಡು ರೀತಿಯಲ್ಲಿ ಎದುರಾಗುತ್ತದೆ. ಒಂದು, ಪುರೋಹಿತಶಾಹಿ ಧಾರ್ಮಿಕ ಯಾಜಮಾನ್ಯ. ಈಗಾಗಲೇ ಪ್ರಸ್ತಾಪಿಸಿದ ವೈದಿಕ ಸಮೂಹವು ತಮ್ಮ ಸನಾತನ ವರ್ಣಾಶ್ರಮ ಧರ್ಮವನ್ನು ಮರುಸ್ಥಾಪಿಸುವ ಮೂಲಕ ಹಿಂದಿನ ಯಜಮಾನಿಕೆಯನ್ನು ಪಡೆಯಲು ಹವಣಿಸುತ್ತಿದೆ. ಅದರ ತಾರತಮ್ಯ ನೀತಿಯ ವಿರುದ್ಧ ಬಂಡೆದ್ದ ಶರಣ ಸಮೂಹವನ್ನು ಶತ್ರುಗಳಾಗಿ ಕಲ್ಪಿಸಿಕೊಂಡಿದೆ. ಅವರ ಸಾಮಾಜಿಕ ಸಂಕ್ರಮಣದ ಉದ್ದೇಶದ ಕ್ರಾಂತಿಯನ್ನು ವಿಫಲಗೊಳಿಸಲು ನೆಪಗಳಿಗಾಗಿ ಹುಡುಕುತ್ತಿದೆ.

ಇನ್ನೊಂದು, ಪ್ರಭುತ್ವಶಾಹಿ ರಾಜಕೀಯ ಯಾಜಮಾನ್ಯ. ಪ್ರಭುತ್ವಕ್ಕೆ ತನ್ನದೇ ಆದ ಜವಾಬ್ದಾರಿಗಳು ಇರುತ್ತವೆ. ಜೊತೆಗೆ, ಅದಕ್ಕೆ ತನ್ನ ಅಧಿಕಾರದ ಅಸ್ತಿತ್ವವನ್ನು ಉಳಿಸಿಕೊಳ್ಳುವುದು ಬಹುದೊಡ್ಡ ಸವಾಲು. ಅದಕ್ಕಾಗಿ ಯಾವುದೇ ಅತಿಗೆ ಕೂಡ ಹೋಗಬಲ್ಲದು. ಚರಿತ್ರೆಯಲ್ಲಿ ಇದಕ್ಕೆ ಸಾಕಷ್ಟು ನಿದರ್ಶನಗಳಿವೆ. ತನ್ನ ರಾಜ್ಯದಲ್ಲಿ ಶರಣರ ಪ್ರತಿರೋಧ ಶಕ್ತಿ ಬೆಳೆಯುತ್ತಿರುವ ಅರಿವು ಬಿಜ್ಜಳನಿಗಿದೆ. ವೈದಿಕರು ಹಾಗೂ ಶರಣರ ನಡುವೆ ಆತ ಅಡ್ಡಕತ್ತರಿಯ ಹಾಗೆ ಸಿಲುಕಿದ್ದಾನೆ. ಇಬ್ಬರ ಅಹವಾಲುಗಳು ಹಾಗೂ ಪ್ರತಿಭಟನೆಗಳಿಗೆ ಕಿವಿಗೊಡಬೇಕು. ಇಬ್ಬರನ್ನೂ ಸಂತೈಸಬೇಕು ಅಥವಾ ಶಿಕ್ಷಿಸಬೇಕು. ಅದರ ಜೊತೆಜೊತೆಯಲ್ಲೇ ಆತ ಯಾವುದು ತನ್ನ ಆಳ್ವಿಕೆಗೆ ಮಾರಕವಾದುದು ಮತ್ತು ಯಾವುದು ಪ್ರೇರಕವಾದುದು ಎಂಬುದರ



ಲೆಕ್ಕಾಚಾರ ಮಾಡುತ್ತಿರಬೇಕು. ಶರಣರಿಗಿಂತ ವೈದಿಕರ ಜೊತೆ ನಿಂತರೆ ತನಗೆ ಲಾಭವೆಂಬುದು ಅವನಿಗೀಗ ಅರಿವಾಗಿದೆ.

ಹಾಗಾಗಿ, ಬಿಜ್ಜಳ ಒಬ್ಬ ದ್ವಂದ್ವ ವ್ಯಕ್ತಿತ್ವದ ನಾಯಕನಾಗಿ ನಾಟಕದ ಉದ್ದಕ್ಕೂ ಬಿಂಬಿತವಾಗಿದ್ದಾನೆ. ನಾಟಕದಲ್ಲಿ ಬಸವಣ್ಣ ಬರುವ ಪೂರ್ವದಲ್ಲಿ ಹಾಗೂ ಬಂದ ಅನಂತರ ಆತನಾಡುವ ಮಾತುಗಳು ರಾಜಕಾರಣಿಯ ದ್ವಿಮುಖ ವ್ಯಕ್ತಿತ್ವಕ್ಕೆ ಪುರಾವೆ ಒದಗಿಸುತ್ತವೆ. ಅವು ಪ್ರಬಲಜಾತಿಯ ಜನವರ್ಗದ ಮನಸ್ಸನ್ನು ತೃಪ್ತಿಗೊಳಿಸಿ ರಾಜಶಾಹಿ ಉಳಿಸುವ ಇಂಗಿತ ವ್ಯಕ್ತಮಾಡುತ್ತವೆ. ತನ್ನ ಹತೋಟಿ ಮೀರಿ ಬೆಳೆಯುತ್ತಿರುವ ಬ್ರಾಹ್ಮಣ–ಶೂದ್ರ ಸಮಸ್ಯೆ ಬಗ್ಗೆ ಮೈಪರಚಿಕೊಳ್ಳುವ ದೊರೆ ಇವನು. ವೈದಿಕರ ಮುಂದೆ ಸನಾತನತೆಯನ್ನೂ ಬಸವಣ್ಣನ ಎದುರು ಸಮಾನತೆಯನ್ನೂ ಕ್ರಾಂತಿಯನ್ನೂ ಮೈದುಂಬಿದವನಂತೆ ಹೊಗಳುತ್ತಾನೆ. ಒಟ್ಟಿನಲ್ಲಿ ಬಿಜ್ಜಳನ ಮನಸ್ಸು ಈ “ಅಧಿಕಾರ–ಹೆಣ್ಣು–ಸಂಪತ್ತಿನ ಭೋಗ” ಈ ದ್ವಂದ್ವಗಳ ಸುತ್ತಲೇ ತಿರುಗುತ್ತದೆ.

ಬಸವಣ್ಣ ತಾನು ಬಿಜ್ಜಳನ ಜೊತೆಗಿನ ಸಂವಾದದಲ್ಲಿ ಈ ದ್ವಂದ್ವಗಳನ್ನು ಪರಿಹರಿಸಿ ನೈತಿಕತೆಯ ಕಡೆಗೆ ಕರೆದೊಯ್ಯುವ ಯತ್ನ ಮಾಡುತ್ತಾನೆ. ಆದರೆ, ಸಂಪ್ರದಾಯವಾದಿಗಳ ಒಡನಾಟ ಹಾಗೂ ಅಹವಾಲುಗಳನ್ನು ತಲೆಗೇರಿಸಿಕೊಂಡಿರುವ ಆತ ಬಸವಣ್ಣನ ಮಾತುಗಳನ್ನು ಕೇಳಿ ಅರಳುವ ಸ್ಥಿತಿಯಲ್ಲಿಲ್ಲ. ಕೆರಳಿದವನಂತೆ ಮಾತನಾಡುತ್ತಾನೆ:

ಬಿಜ್ಜಳ : ನಾಳೆ ಸಂಕ್ರಾಂತಿ, ಸೂರ್ಯ ತನ್ನ ಪಥ ಬದಲಿಸುವ ವೇಳೆ, ಭೂಮಿಗೆ ರಕ್ತ ಎರೆಯಬೇಕು.

ಬಸವಣ್ಣ: ಈ ರಕ್ತದಾಹ ನನಗೆ ಅರ್ಥವಾಗುತ್ತಿಲ್ಲ.

ಬಿಜ್ಜಳ: ತಮ್ಮ ಅಹಿಂಸೆಯ ಹುಚ್ಚು ಕೂಡ ನನಗೆ ಅರ್ಥವಾಗುತ್ತಿಲ್ಲ....ಸಂಕ್ರಾಂತಿಯಂದು ಸೂರ್ಯ ದಕ್ಷಿಣಕ್ಕೆ ಸರಿಯುತ್ತಾನೆ, ಗರ್ಭಿಣಿ ಭೂಮಿ ತಾಯಿಯ ಬಯಕೆ ತೀರಿಸಬೇಕಾದ್ದು ನನ್ನ ಕರ್ತವ್ಯ.(ಪುಟ.೫೨).

ರಾಜಕೀಯವನ್ನು ತನ್ನ ಮುಷ್ಟಿಯಲ್ಲಿ ಭದ್ರವಾಗಿಟ್ಟುಕೊಂಡಿರುವ ಪುರೋಹಿತಶಾಹಿಯು ಪ್ರಭುತ್ವವನ್ನೂ ಬಿಡುವುದಿಲ್ಲ. ಅದರ ಅರಿವಿರುವ ರಾಜ ಶರಣರ ವಿರುದ್ಧದ ರಾಜಕೀಯ ಪಿತೂರಿ ತನ್ನ ವಿರುದ್ಧ ತಿರುಗುವ ಮುನ್ನ ತನ್ನ ಅಧಿಕಾರ ಉಳಿಸಿಕೊಳ್ಳಲು ವಿಚಾರಣೆಯ ಶಾಸ್ತ್ರ ನಡೆಸಿ, ಅತ್ಯಾಚಾರ ಪ್ರಕರಣ

ಎಂದು ತೀರ್ಮಾನಿಸಿ, ರುದ್ರನನ್ನು ದಂಡಿಸುವುದರ ಮೂಲಕ ಮದುವೆಯನ್ನು ತಡೆಯುತ್ತಾನೆ. ಸಂಕ್ರಾಂತಿಗೆ ಬಲಿ ಪಡೆಯುತ್ತಾನೆ. ಈ ಅರ್ಥದಲ್ಲಿ ಇದು ದಂಡನೆಯಲ್ಲ, ನರಬಲಿ; ಸಾಮಾಜಿಕ ಕೊಲೆ.

೩. ವರ್ಣಸಂಕರದ ನೆಲೆ: ವರ್ಣಸಂಕರದ ಅರ್ಥ ಮತಾಂತರ ಇಲ್ಲವೆ ಮತ ಧರ್ಮಗಳ ಬೆರಕೆ. ಅದರ ಮೂಲಕ ಸೃಷ್ಟಿಯಾಗುವ ಬದಲಾವಣೆಯನ್ನು ಆಶಯವಾಗಿ ನಮ್ಮ ಪಠ್ಯಗಳು ಮಂಡಿಸುತ್ತಲೇ ಬಂದಿವೆ. ಅದೊಂದು ಆದರ್ಶ ರೂಪದ ಕಲ್ಪನೆ ಎಂದು ಪರಿಗಣಿಸಿದ ನವ್ಯಸಾಹಿತ್ಯದ ವಲಯದಲ್ಲಿದ್ದವರು ಲಂಕೇಶರು. ವ್ಯಕ್ತಿತ್ವ ಶೋಧನೆ ನವ್ಯದ ಒಂದು ಮುಖ್ಯ ಆಶಯ. ಆದ್ದರಿಂದ ಆದರ್ಶಾತ್ಮಕ ಕನಸನ್ನು ಭ್ರಮೆಯಾಗಿ ಪರಿಗಣಿಸಿ ಅಸ್ತಿತ್ವವಾದಿ ನೆಲೆಯಲ್ಲಿ ಸಂಕರದ ಪ್ರಶ್ನೆಯನ್ನು ಶೋಧಿಸುತ್ತಾ ಹೋಗುತ್ತಾರೆ.

ನಾಟಕ ಪ್ರಾರಂಭವಾಗುವುದು ಉಜ್ಜ ಮತ್ತು ಕೆಂಚನ ಪ್ರವೇಶದಿಂದ. ಇಬ್ಬರೂ ದೇಸಿ ಜನಸಂಸ್ಕೃತಿಯ ಪ್ರತಿನಿಧಿಗಳು. ಉಜ್ಜ ಕೆಂಚ ಮತ್ತು ಇನ್ನು ಕೆಲವರು ಸಂಭಾಷಣೆಯಿಂದ ನಮಗೆ ಕತೆಯ ಜಾಡು ಪರಿಚಯವಾಗುತ್ತದೆ. ಇದರ ಸ್ವರೂಪ ಎರಡು ರೀತಿಯಲ್ಲಿ ಅಭಿವ್ಯಕ್ತವಾಗುತ್ತದೆ. ಒಂದು, ಬಸವಣ್ಣ ಅಸ್ಪೃಶ್ಯರೆನ್ನುವವರನ್ನು ಶರಣರನ್ನಾಗಿ ಮಾಡುತ್ತಿದ್ದಾನೆ. ಶರಣನಾದವರು ಮಾಂಸ, ಹೆಂಡ, ಇಂಥವುಗಳನ್ನು ತ್ಯಜಿಸಿ ಅಹಿಂಸಾಪರರಾಗಿರಬೇಕು. ಇದು ಶರಣನಾಗಲು ಇರುವ ಮುಖ್ಯ ಶರತ್ತು. ಆದರೆ ಉಜ್ಜ ಹೆಂಡ, ಮಾಂಸ ಮತ್ತು ಅವನ ಪ್ರಿಯ ಸಖಿ ಪಾರಕ್ಕನನ್ನು ಬಿಡುವಹಾಗಿಲ್ಲ. ಇಲ್ಲಿ ನಾಟಕಕಾರನ ದೃಷ್ಟಿ ನಿರೂಪಣೆ ಹೀಗಿದೆ:

ಅ) ಇಲ್ಲಿ ಒಂದು ಸಂಸ್ಕೃತೀಕರಣದ ಒತ್ತಾಯ ನಡೆಯುತ್ತದೆ. ಇಂಥದ್ದೊಂದು ಬಸವಣ್ಣರ ವ್ಯಕ್ತಿ ಪ್ರಭಾವದಿಂದ ನಡೆಯುತ್ತದೆಯೇ ಹೊರತು ನಿಜ ಪರಿವರ್ತನೆ ಅಲ್ಲ.

ಆ) ಇಂಥ ಬದಲಾವಣೆ ಜೀವನದಲ್ಲಿ ಯಾವ ಪರಿವರ್ತನೆಯನ್ನೂ ತರುವುದಿಲ್ಲ. ಹೆಚ್ಚೆಂದರೆ 'ರುದ್ರ'ನ ಹಾಗೆ ಶೂದ್ರ ಶಕ್ತಿಯನ್ನು ಕಳೆದುಕೊಂಡ ನಿರ್ವೀರ್ಯ ವ್ಯಕ್ತಿಯನ್ನಾಗಿ ಮಾತ್ರ ಮಾಡುತ್ತದೆ.

ಇ) ದಲಿತ ಯುವಕ ರುದ್ರನನ್ನು ಬ್ರಾಹ್ಮಣ ಹುಡುಗಿ ಪ್ರೀತಿಸಿದ್ದಾಳೆ. ಈ ಮೂರೂ ಒಂದು ಸಂಕೀರ್ಣ ಸಂದರ್ಭ.ಜಡವಾದ ವರ್ಣ ಸಮಾಜವೊಂದು ಚಲನಶೀಲವಾಗತೊಡಗಿದೆ. ಅದೇ ಹೊತ್ತಿಗೆ ಅದು ಆರ್ಥಿಕ ಶಕ್ತಿಯಿಂದ ಮತ್ತು ಸ್ವಯಂ ಜಾಗೃತಿಯಿಂದ ಪೋಷಣೆ ಪಡೆಯುತ್ತಿಲ್ಲ(ಆರ್.ವಿ. ಭಂಡಾರಿ). ಒಟ್ಟಿನಲ್ಲಿ



ನಾಟಕವು ಕಟ್ಟಿಕೊಡುವಂತೆ, ಆಚಾರ ಮತ್ತು ಆಹಾರದ ಯಾಜಮಾನ್ಯವು ವರ್ಣಸಂಕರದ ಬಿರುಸಿಗೆ ತಡೆಯೊಡ್ಡುತ್ತಿದೆ. ಇಲ್ಲಿ ರುದ್ರ ಯಾಜಮಾನ್ಯದ ವಾರಸುದಾರನಾಗುತ್ತಿದ್ದಾನೆ. ಅಂದರೆ ಇಡೀ ಒಂದು ಕಾಲಘಟ್ಟದ ಸಾಮಾಜಿಕ ಸಮಸ್ಯೆಯನ್ನು ಲೇಖಕರು ಹೀಗೆ ವ್ಯಕ್ತಿವಾದಿ ನೆಲೆಯಲ್ಲಿ ನೋಡುತ್ತಿದ್ದಾರೆ. ಆ ಮೂಲಕ ಒಟ್ಟು ವ್ಯವಸ್ಥೆಯ ದೋಷವನ್ನು ರುದ್ರನಂತಹ ಒಬ್ಬ ವ್ಯಕ್ತಿಯ ವೈಯಕ್ತಿಕ ಬೆಳವಣಿಗೆಯ ಮೇಲೆ ಹೊರಿಸುತ್ತಾರೆ. ಆದರೆ ಸಂಸ್ಕೃತೀಕರಣದ ಕಾರಣ–ಪರಿಣಾಮಗಳನ್ನು ಆತನ ಸಾಮಾಜಿಕ–ಆರ್ಥಿಕ ನೆಲೆಯಲ್ಲಿ ಹುಡುಕಬೇಕೇ ಹೊರತು ವೈಯಕ್ತಿಕ ಆಸಕ್ತಿಯಾದ ಆಹಾರ ಪಾನೀಯಗಳಲ್ಲಿ ಅಲ್ಲ. ಹಾಗೆ ನೋಡುವುದು ದೃಷ್ಟಿಕೋನದ ಮಿತಿ ಆಗುತ್ತದೆ.

೪. ಸ್ತ್ರೀ ಸಂವೇದನೆಯ ನೆಲೆ: ಬ್ರಾಹ್ಮಣರ ಹುಡುಗಿ ಉಷಾ ಹುಟ್ಟಿನಿಂದ ತಳಜಾತಿಯವನಾದ ರುದ್ರನ ನಡುವಿನ ಪ್ರೇಮ ಪ್ರಕರಣದ ಸುತ್ತ ಸಂಕ್ರಾಂತಿ ನಾಟಕ ಸುತ್ತುತ್ತದೆ. ಸ್ತ್ರೀ ಸಂವೇದನೆಯ ದೃಷ್ಟಿಯಿಂದ ನೋಡಿದರೆ ನಾಟಕದ ಕೇಂದ್ರ ಆಶಯ ಹೆಣ್ಣುಗಂಡಿನ ಪ್ರೇಮವೇ ಆಗಿದೆ.ಅದನ್ನು ಲಂಕೇಶರು ಈ ಕೃತಿಯ ಬೆನ್ನುಡಿಯಲ್ಲಿ ಹೀಗೆ ಬಯಲುಗೊಳಿಸುತ್ತಾರೆ: "ಹನ್ನೆರಡನೆಯ ಶತಮಾನದ ಧಾರ್ಮಿಕ, ಸಾಮಾಜಿಕ ಅಲ್ಲೋಲ ಕಲ್ಲೋಲದಲ್ಲಿ ಹುಡುಗ–ಹುಡುಗಿಯ ನಡುವಿನ ಸರಳ ಪ್ರೇಮ ಕೂಡ ವಿಚಿತ್ರ ರೀತಿಯಲ್ಲಿ 'ಭಂಗ'ಕ್ಕೊಳಗಾಯಿತು." ಹೀಗೆ ನಿಸರ್ಗ ಸಹಜವಾಗಿ ಅರಳಬೇಕಾದ ಉಷಾ–ರುದ್ರರ ಪ್ರೇಮವು ಕಾಮದ ಪ್ರಕರಣವಾಗಿ ಮಾರ್ಪಟ್ಟು ರಾಜ ಪ್ರಭುತ್ವ, ಪುರೋಹಿತಶಾಹಿ ಹಾಗೂ ಶರಣ ಸಮೂಹದ ನಡುವಿನ ಸಂಘರ್ಷಕ್ಕೆ ವೇದಿಕೆಯಾಗುತ್ತದೆ.

ಪ್ರಕೃತಿಯು ರಚಿಸಿರುವ ಸಕಲ ಸೃಷ್ಟಿ ಮೂಲಗಳಲ್ಲಿ ಹೆಣ್ಣು ಮತ್ತು ಗಂಡು ಅದರ ಎರಡು ಕಣ್ಣುಗಳೇ ಆಗಿವೆ. ಅಂತಹ ಪ್ರಕೃತಿಯಲ್ಲಿ ಲಿಂಗ ತಾರತಮ್ಯವಿಲ್ಲ, ಲಿಂಗ ವ್ಯತ್ಯಾಸವಿದೆ. ಅದು ಜೈವಿಕ ಭಿನ್ನತೆಯಷ್ಟೆ; ಜೀವಭೇದವಲ್ಲ. ಆದರೆ, ಜೈವಿಕ ಭಿನ್ನತೆಯೊಂದನ್ನೇ ದಾಳವಾಗಿಸಿಕೊಂಡ ಗಂಡು ತಾನು ಪ್ರಬಲನೆಂದೂ ಶ್ರೇಷ್ಠನೆಂದೂ ಸಾರಿಕೊಂಡು, ಹೆಣ್ಣನ್ನು ಕೀಳಾಗಿ–ನಿಕೃಷ್ಟವಾಗಿ ನಡೆಸಿಕೊಳ್ಳುತ್ತಿರುವ ಸನ್ನಿವೇಶವನ್ನು ಪ್ರಪಂಚದ ತುಂಬ ಕಾಣುತ್ತಿದ್ದೇವೆ. ಒಟ್ಟು ಜನಸಂಪತ್ತಿನ ಅರ್ಧದಷ್ಟಿರುವ ಹೆಣ್ಣು ಕುಲವನ್ನು ಹೀಗೆ ಎರಡನೆಯ ದರ್ಜೆಯ ಪ್ರಜೆಯಾಗಿಯೇ ದುಡಿಸಿಕೊಂಡುದರ ಹಿಂದೆ ಸುದೀರ್ಘ ಇತಿಹಾಸವಿದೆ.

ಈ ಮಾತುಗಳ ಹಿನ್ನೆಲೆಯಲ್ಲಿ ನೋಡಿದರೆ, ಇಡೀ ನಾಟಕದ ಮುಖ್ಯವಾದ

ಮತ್ತು ವಿಶಿಷ್ಟವಾದ ಪಾತ್ರ ಉಷಾಳದು. ಅವಳ ಮೂಲಕ ಸ್ತ್ರೀಚೈತನ್ಯದ ಸ್ವಾತಂತ್ರ್ಯ ಪ್ರಜ್ಞೆಯನ್ನು ಆ ಕಾಲಕ್ಕೆ ದೃಢವಾಗಿ ಚಿತ್ರಿಸಲಾಗಿದೆ. ಈ ಪಾತ್ರ ನಾಟಕದ ಕೇಂದ್ರವಾಗಿದ್ದು, ಗಂಡಿಗೆ ಅಧೀನಳಾಗಿಯೋ ಪೂರಕವಾಗಿಯೋ ಚಲಿಸುವುದಿಲ್ಲ. ಕಥೆಯ ನಿರ್ಣಾಯಕ ಪಾತ್ರವಾಗಿ ಪುರೋಹಿತಶಾಹಿಗೂ, ಪ್ರಭುತ್ವಕ್ಕೂ, ಶೂದ್ರತ್ವಕ್ಕೂ, ವರ್ಣಸಂಕರಕ್ಕೂ ಏಕಕಾಲದಲ್ಲಿ ಮುಖಾಮುಖಿ ಆಗುತ್ತದೆ.

ಇಲ್ಲಿ ಉಷಾ ಪ್ರೀತಿಸಿರುವುದು ಶೂದ್ರತ್ವದ ಒರಟುತನ ಮೇಳೈಸಿರುವ ರುದ್ರನನ್ನು, ಅವನ ಸಹಜ ಸುಖದ ಸ್ವಚ್ಛಂದ ಬದುಕನ್ನು, ನೆಲವನ್ನು ಆರಾಧಿಸುವ ಸಂಸ್ಕೃತಿಯನ್ನು. ಯಾವುದೇ ಸಮಾಜ ವಿಕಾಸಮುಖಿಯಾಗಿ ಚಲಿಸಬೇಕಾದ ದಿಕ್ಕು ಇದೇ ಆಗಿರುತ್ತದೆ. ಅದನ್ನು ಸ್ತ್ರೀಚೈತನ್ಯದ ಸ್ವಾತಂತ್ರ್ಯ ಪ್ರಜ್ಞೆಯ ಮೂಲಕ ಲೇಖಕರು ವಿಶೇಷವಾಗಿ ಚಿತ್ರಿಸುತ್ತಿದ್ದಾರೆ. ತಾನು ಹುಟ್ಟಿ ಬೆಳೆದ ಪರಿಸರದಿಂದ ಸಂಪೂರ್ಣ ಭಿನ್ನವಾದ, ಮಣ್ಣಿಗೆ ಹತ್ತಿರವಾದ, ಸಹಜ ಸ್ವಭಾವದ ರುದ್ರ ಅವಳ ವೈದಿಕ ಮನಸ್ಸಿನಲ್ಲಿ ಅಲ್ಲೋಲ ಕಲ್ಲೋಲ ಉಂಟು ಮಾಡಿದ್ದು ಆತನ ಜಾಣತನದಿಂದಲ್ಲ; ಶರಣ ವೇಷದಿಂದಲ್ಲ. ತನ್ನದೇ ವ್ಯಕ್ತಿತ್ವದ ಅರಕೆಯನ್ನು ನೀಗಿಕೊಳ್ಳಲು ಆಕೆ ಅವನನ್ನು ಪ್ರೇಮಿಸಿದಳು. ಆದರೆ ವೈದಿಕರಿಗೆ ಹತ್ತಿರವಾದ ರುದ್ರನ ಶರಣತ್ವ ಸ್ಪಷ್ಟವಾಗಿ ಗೋಚರವಾಗತೊಡಗಿದಂತೆ ಅವಳ ಪ್ರೇಮ ತಿರಸ್ಕಾರಕ್ಕೆ ಎಡೆ ಮಾಡಿಕೊಡುತ್ತದೆ.

ಉಷಾ ಯಾಕೆ ಪ್ರೇಮ ಪ್ರಕರಣವನ್ನು ಅತ್ಯಾಚಾರ ಎನ್ನುತ್ತಿದ್ದಾಳೆ? ಈ ಪ್ರಶ್ನೆಗೆ ಉತ್ತರ ಅವಳ ಮುಂದಿನ ಮಾತುಗಳಲ್ಲಿ ಕೇಳಬಹುದು: "ನನ್ನ ಬಳಿ ಮಾತಾಡುತ್ತಿದ್ದವ ಬೇರೆ. ಆತ ಬಂದು ಮೈಮೇಲೆ ಬಿದ್ದ. ಆತ ನನಗೆ ಬೇಕಾದವನಾಗಿದ್ದ; ಆದರೆ ನಾನು ಎದ್ದು ನೋಡಿದಾಗ ಆತ ಇರಲಿಲ್ಲ. ಅಲ್ಲಿದ್ದವನು ಶರಣ ರುದ್ರ.. ಇದು ಅತ್ಯಾಚಾರವಲ್ಲದೆ ಮತ್ತೇನು?"(ಪುಟ.೭೮).

ಇಂತಹ ಸಮರ್ಥನೆ ನೀಡುವ ಇದೊಂದು ಸಂಕೀರ್ಣ ಪಾತ್ರವಾಗಿದ್ದು, ಈ ಪಾತ್ರಕ್ಕೆ ಇರುವ ಗಂಭೀರವಾದ ಮಿತಿಯನ್ನು ವಿಮರ್ಶಕರು ಗುರುತಿಸಿದ್ದಾರೆ. ಅದೇನೆಂದರೆ, "ಉಷಾ ಶೂದ್ರ ಶಕ್ತಿಯ ಚೈತನ್ಯವನ್ನು ಕೆಣಕಿ ಅಲ್ಲಿ ತನ್ನನ್ನು ಲೀನಗೊಳಿಸಿಕೊಂಡರೂ ಪುರೋಹಿತಶಾಹಿ ಯಾಜಮಾನ್ಯ ಹಾಗೂ ಪ್ರಭುತ್ವದ ಹಿತಾಸಕ್ತಿಯನ್ನು ಎತ್ತಿ ಹಿಡಿಯುತ್ತಾಳೆ. ಪ್ರಾರಂಭದಲ್ಲಿ ಶುದ್ಧ ಪ್ರೇಮ, ಪುರೋಹಿತಶಾಹಿಯ ದಿಕ್ಕಾರ, ಪ್ರಭುತ್ವದ ದಿಕ್ಕಾರಗಳ ಪ್ರತೀಕವಾಗಿ ಕಾಣಿಸಿಕೊಳ್ಳುವ ಉಷಾಳ ಪಾತ್ರ ಬರುಬರುತ್ತ ತನ್ನ ಆಸೆಗಳು ಒಂದೊಂದಾಗಿ ಈಡೇರುತ್ತಿದ್ದಂತೆ



ಹೋರಾಟದ ನೆಲೆಯಿಂದ ಸೇಡಿನ ನೆಲೆಗೆ ಹೊರಳುವುದು ಆಶ್ಚರ್ಯವಾಗಿ ಕಾಣುತ್ತದೆ. ಅವಳು ಬ್ರಾಹ್ಮಣತ್ವಕ್ಕಿಂತ ಶರಣತ್ವವನ್ನು ಕುರಿತು ಬಹಳವಾಗಿ ದ್ವೇಷಿಸುತ್ತಾಳೆ"(ಮಂಜುನಾಥ ಪಾಳ್ಯ). ಸೂಕ್ಷ್ಮವಾಗಿ ನೋಡಿದರೆ, ಈ ಮಾತುಗಳು ಹೊಸದೊಂದು ಚರ್ಚೆಗೆ ಆಹ್ವಾನ ನೀಡುತ್ತದೆ.

೫. ಸಾಂಸ್ಕೃತಿಕ ನೆಲೆ: ಇಷ್ಟಾಗಿಯೂ ಒಟ್ಟು ಸಂಕ್ರಾಂತಿ ನಾಟಕದ ಮುಖ್ಯ ನಾಯಕ ಎಂದು ಕರೆಯಬಹುದಾದ ಪಾತ್ರ ಹೊಲೇರುಜ್ಜನದು. ಆತ ಇಲ್ಲಿ ಮಣ್ಣಿಗೆ ಹತ್ತಿರವಾದ ಸಹಜ ಬದುಕಿನ ಪ್ರತಿನಿಧಿಯಾಗಿ ಕೆಂಚನೊಂದಿಗೆ ಕಾಣಿಸಿಕೊಳ್ಳುತ್ತಾನೆ. ನಾಟಕದ ತುಂಬಾ ಬಸವ, ಬಿಜ್ಜಳ, ಉಷಾ, ರುದ್ರರಂತಹ ಪರಿವರ್ತನೆಗೊಂಡ ಪಾತ್ರಗಳೇ ತುಂಬಿಕೊಂಡಿವೆ. ಆದರೆ, ಅವೆಲ್ಲಕ್ಕಿಂತ ಭಿನ್ನವಾಗಿ ನಿಲ್ಲುವ ಪಾತ್ರ ಉಜ್ಜನದು. ಆತ ನಾಟಕದ ಸಂವಿಧಾನದೊಳಗೆ ಒಂದು ಸ್ವಸಂಪೂರ್ಣ ಸಂಸ್ಕೃತಿಯಿಂದ ಮೈದುಂಬಿದ ಅಪೂರ್ವ ವ್ಯಕ್ತಿಚೈತನ್ಯವಾಗಿ ಗೋಚರಿಸುತ್ತಾನೆ. ಉಜ್ಜನೇ ಪ್ರಮುಖ ಪಾತ್ರ ಎನ್ನುವುದಕ್ಕೆ ನಾಟಕದ ಮೊದಲ ದೃಶ್ಯಾರಂಭವೇ ಒಲಿದಂತೆ ಹಾಡುವ ಆತನ ಸಂಸ್ಕೃತಿಯ ವೈಭವವನ್ನು ತೆರೆಯ ಮುಂದಿಡುತ್ತದೆ.

ಉಜ್ಜನಿಗೆ ತನ್ನ ಆಹಾರ ಕ್ರಮದ ಜೊತೆಗೆ ಬಿಟ್ಟಿರಲಾರದ ನಂಟಿದೆ. ಇಂತಹ ಉಸಿರಾಟದಷ್ಟೇ ಸಹಜವಾದ ಆಹಾರ ಕ್ರಮವನ್ನು ಸಂಸ್ಕೃತೀಕರಣದ ಹೆಸರಿನಲ್ಲಿ ಕದಡಿದಾಗ ನಿಜವಾದ ಸಂಘರ್ಷ ಕಾಣಿಸಿಕೊಳ್ಳುತ್ತದೆ. ತಮ್ಮ ದೈನಂದಿನ ಬದುಕಿನ ಜೀವಾಳವಾದ ಆಹಾರ ಪದ್ಧತಿಯನ್ನು ತಿರಸ್ಕರಿಸುವ, ಸಸ್ಯಾಹಾರವನ್ನು ಆದರ್ಶವೆಂದು ಬಿಂಬಿಸುವ ಸಂಸ್ಕೃತೀಕರಣದ ನಡೆಗಳು ಸಮುದಾಯದ ಚೈತನ್ಯವನ್ನು ಘಾಸಿಗೊಳಿಸುತ್ತವೆ; ಕುಗ್ಗಿಸುತ್ತವೆ. ಆಹಾರ ಎನ್ನುವುದು ಪರಿಸರ, ರೂಢಿ ಹಾಗೂ ದೇಹ ಪ್ರಕೃತಿಯನ್ನು ಆಧರಿಸಿ ರೂಪುಗೊಳ್ಳುವಂಥದ್ದು. ಅದನ್ನು ಬದುಕಿನಿಂದ ಬೇರ್ಪಡಿಸುವುದು ಸುಲಭವಲ್ಲ. ಮೇಲು ಕೀಳಾಗಿ ಗುರುತಿಸುವುದಂತೂ ಯಾವಾಗಲೂ ಸಮಸ್ಯಾತ್ಮಕ. ಇಲ್ಲಿ ಲಂಕೇಶರು ತಮ್ಮ ನಾಟಕದ ಚೌಕಟ್ಟಿನೊಳಗೆ ಈ ಮುಖ್ಯಪ್ರಶ್ನೆಯನ್ನು ತಂದಿಟ್ಟು ಮುಖಾಮುಖಿ ಮಾಡಿ ವಿಶ್ಲೇಷಿಸುತ್ತಾರೆ.

ಸಮುದಾಯದ ಒಳಗೆ ಒಬ್ಬ ಸೂಕ್ಷ್ಮ ಅಡಿುಣುಛಿಚಿಟ ಎಟುಜಜಡಿ ಆಗಿ ಪ್ರವೇಶಿಸುವ ಲಂಕೇಶರು ಈ ಮಹತ್ವದ ಪ್ರಶ್ನೆಯನ್ನು ಮುಂದಿಡುತ್ತಾರೆ. "ನನ್ನ ಜನಾಂಗಕ್ಕೆ ಇದು ಸಂಬಂಧಿಸಿರದಿದ್ದರೆ ನಾನು ಬರೆಯುತ್ತಲೇ ಇರಲಿಲ್ಲ. ನನ್ನ ಪ್ರಜ್ಞೆಗೆ ತೀರಾ ಹತ್ತಿರವಾದ ವಸ್ತು ಇದೆಂಬ ಕಾರಣಕ್ಕೆ ಈ ಮಾತು ಹೇಳುತ್ತಿದ್ದೇನೆ" ಎಂದು ಸ್ಪಷ್ಟೀಕರಿಸಿ ನಾಟಕದ ರಚನೆಗೆ ಮುಂದಾಗುತ್ತಾರೆ. ಅವರ ಪ್ರಕಾರ,

ಬಸವಣ್ಣ ದಲಿತ, ಶೂದ್ರರಿಗೆ ಶರಣ ದೀಕ್ಷೆ ನೀಡಿ ಮೇಲುಜಾತಿಯ ಬದುಕಿನ ಕ್ರಮಕ್ಕೆ ಒಗ್ಗಿಸಲು ಪ್ರಯತ್ನಿಸುತ್ತಾನೆ. ಹೀಗೆ ದೀಕ್ಷೆಗೊಳಗಾದವರು ತಮ್ಮ ಆಹಾರ–ಪಾನೀಯಗಳನ್ನು ಹೇಸಿಗೆ ಎಂದು ತಿರಸ್ಕರಿಸಿ ಹೊಸ ಆಚಾರಗಳನ್ನು ರೂಢಿಸಿಕೊಳ್ಳುತ್ತಾರೆ. ಆದರೆ, ಇದು ಮೇಲು ನೋಟಕ್ಕೆ ಬದಲಾವಣೆಯಂತೆ ತೋರುತ್ತದೆಯಷ್ಟೆ. ತಳವರ್ಗದವರು ಆಳದಲ್ಲಿ ಇದನ್ನು ಬಹಳಕಾಲ ಅಳವಡಿಸಿಕೊಳ್ಳಲು ಸಾಧ್ಯವಾಗಲಿಲ್ಲ. ಹೀಗೆ ನಿಜವಾದ ಅರ್ಥದಲ್ಲಿ ಮನಃಪೂರ್ವಕ ಚಲನೆ ಕಾಣಿಸದೆ ತಳಮಳಿಸುವುದನ್ನು ಉಜ್ಜನ ಪಾತ್ರದ ಮೂಲಕ ನಮಗೆ ಕಾಣಿಸುತ್ತಾರೆ. ಇದನ್ನು ದಲಿತ–ಶೂದ್ರರ ಬ್ರಾಹ್ಮಣೀಕರಣ ಎಂದು ಗ್ರಹಿಸಿ, ಸಂಸ್ಕೃತೀಕರಣದ ಇಂತಹ ಅಸಹಜ ಪ್ರಯತ್ನಗಳೇ ಕಲ್ಯಾಣಕ್ರಾಂತಿಯ ಸೋಲಿಗೆ ಕಾರಣವಾಗಿವೆ ಎಂಬ ತೀರ್ಮಾನಕ್ಕೆ ಬರುತ್ತಾರೆ.

**ಬಸವ ವ್ಯಕ್ತಿತ್ವ ದರ್ಶನ**

ಕೊನೆಯದಾಗಿ, ನಾಟಕದಲ್ಲಿ ನಮಗೆ ನಾಲ್ಕು ಪ್ರಮುಖ ಸಂಸ್ಕೃತಿಗಳು ಪ್ರತಿನಿಧೀಕರಣಗೊಂಡು ಕಾಣಿಸುತ್ತವೆ: ೧) ಯಜಮಾನಶಾಹಿ–ಬಿಜ್ಜಳ ೨) ಪುರೋಹಿತಶಾಹಿ–ಬ್ರಾಹ್ಮಣರು ೩) ಸಂಕರ–ರುದ್ರ, ಉಷಾ ೪) ತಳ ಜನ–ಉಜ್ಜ, ಕೆಂಚ. ಸೂಕ್ಷ್ಮವಾಗಿ ಗಮನಿಸಿದರೆ, ಬಸವಣ್ಣ ಈ ನಾಲ್ಕೂ ಸಂಸ್ಕೃತಿಗಳ ಪ್ರತಿನಿಧಿಯಾಗಿ ನಮ್ಮೆದುರು ಪ್ರಕಟಗೊಳ್ಳುತ್ತಾನೆ. ಪುರೋಹಿತಶಾಹಿ ನೆಲೆಯಿಂದ ಹುಟ್ಟಿ ಬಂದು, ಯಜಮಾನಶಾಹಿಯ ಸೇವೆಯಲ್ಲಿದ್ದು, ತಾನೂ ಮತಾಂತರ ಹೊಂದಿ ವರ್ಣ ಸಂಕರಗೊಳ್ಳುತ್ತಾ, ಸಹಜ ಬದುಕಿನ ಬಹುಜನ ತಳಸಮೂಹದ ಜೊತೆ ಗುರುತಿಸಿಕೊಳ್ಳಲು ತುಡಿಯುತ್ತಾನೆ; ದುಡಿಯುತ್ತಾ ಹೋಗುತ್ತಾನೆ.

ನಾಟಕದಲ್ಲಿ ಬಿಜ್ಜಳ ಮತ್ತಿತರ ಪಾತ್ರಗಳನ್ನು ವಿಶ್ಲೇಷಣಾತ್ಮಕವಾಗಿ ಚಿತ್ರಿಸಿರುವ ಹಿನ್ನೆಲೆಯಲ್ಲಿ ಬಸವಣ್ಣನ ವ್ಯಕ್ತಿತ್ವ ಮೇಲ್ನೋಟಕ್ಕೆ ಮಸುಕಾದಂತೆ ಕಾಣುತ್ತದೆ. ಆದರೆ ಸಮಾನತೆಯ ಕನಸಿನ ಬೀಜಗಳನ್ನು ಸಮಾಜದ ಎದೆಯೊಳಗೆ ಬಿತ್ತಲು ಯತ್ನಿಸುವ ಬಸವಣ್ಣನ ಕಾಳಜಿ ಇಲ್ಲಿನ ಅವನ ಅಸ್ತಿತ್ವದಲ್ಲಿ ಒಡೆದು ಕಾಣುತ್ತದೆ. ಎಂದಿನಂತೆ ತಬ್ಬಲಿ ಸಮುದಾಯದ ಸಾಮಾಜಿಕ ಗೌರವ ಕಾಪಾಡುವ ಕಾಯಕದಲ್ಲಿ ದಣಿಯುವುದಿಲ್ಲ. ಆತ ತನ್ನ ಅನುಯಾಯಿ ಬಳಗದ ಕಣ್ಣುಗಳಲ್ಲಿ ತುಂಬಿರುವ ಬಿಡುಗಡೆಯ ಕನಸು ರುದ್ರನ ಮೂಲಕ ವ್ಯಕ್ತವಾಗುವುದು ಹೀಗೆ: "ನಾವೆದ್ದೆವೂ ಅಂದ್ರೆ ಕೆಳಗೆ ಹಾಕಿ ಅಮುಕ್ತೀರಿ ನೀವೆಲ್ಲ! ನಿನಗೆ ಹ್ಯಂಗಾರೂ ಗೊತ್ತಾಗಬೇಕು? ಇವತ್ತು ಹೋದೀತು ಕತ್ತಲು. ನಾಳೆ ಬೆಳಕು ಹರದು ಎಲ್ಲ ಬೆಳ್ಳಂಬೆಳಗಾಗಿ ಎಲ್ಲ



ನೋಡೇವು ಅಂತ ಕಾಯ್ತಿದೀವಿ" (ಪು.೨೨).

ಮಾನವ ನಿರ್ಮಿತ ಉಚ್ಚ ನೀಚಗಳ ಅಂತರದ ಬಗ್ಗೆ, ಒಬ್ಬರು–ಇನ್ನೊಬ್ಬರನ್ನು ದೂರ ಇಡುವುದರ ಬಗ್ಗೆ, ಈ ಕಟ್ಟಳೆಗಳನ್ನು ಮೀರಿ ನಿಲ್ಲುವ ನಿಸರ್ಗ ನಿಯಮಗಳ ಬಗ್ಗೆ ಬಸವಣ್ಣನ ಮಾತುಗಳು ಹೀಗಿವೆ: "ತಮಗೂ ಗೊತ್ತಿರಬೇಕು–ಹುಲಿಗಳ ಜಗತ್ತಿನಲ್ಲಿ ಬಡ ಹುಲಿ ಶ್ರೀಮಂತ ಹುಲಿ ಪುರೋಹಿತ ಹುಲಿ ಹೊಲೆಯ ಹುಲಿ ಇರುವುದಿಲ್ಲ; ಇದೆಲ್ಲಾ ಮನುಷ್ಯರಲ್ಲಿ ಮಾತ್ರ. ಸಮುದ್ರಕ್ಕೆ ಕೂಡ ಮೇಲು ಕೀಳಿನ ಪರಿವೆಯಿಲ್ಲ. ಸೂರ್ಯ ಅರಮನೆ, ದೇವಸ್ಥಾನಗಳ ಮೇಲೆ ಮಾತ್ರ ಬೆಳಗುವುದಿಲ್ಲ. ಆದರೆ ಅದು ಮನುಷ್ಯನ ಕೈಯಲ್ಲಿದ್ದಿದ್ದರೆ ಅದನ್ನೂ ಮಾಡಿಸುತ್ತಿದ್ದ" (ಪು.೫೨). ಬಿಜ್ಜಳನ ತೋರಿಕೆಯ ಕಾಳಜಿಯಲ್ಲಿ ರಾಜಕೀಯ–ವ್ಯಾವಹಾರಿಕತೆ ಗುಪ್ತವಾಗಿ ಕಂಡರೆ, ತೋರಿಕೆಯದಲ್ಲದ ಬಸವಣ್ಣನ ಪ್ರಾಮಾಣಿಕತೆಯನ್ನು ಪ್ರಶ್ನಿಸಲು ಸಾಧ್ಯವಾಗದು.

"ಅರಮನೆಯ ಪಲ್ಲಂಗದ ಮೇಲೆ ಒರಗಿ ಸುಂದರ ಕಂಠಗಳ ಧ್ವನಿ ಕೇಳುವವರಿಗೆ ಬೀದಿಯ ಗೋಳು ತಟ್ಟುವುದು ಕಷ್ಟ. ತಮ್ಮ ಕಿರೀಟದ ಒಂದು ವಜ್ರ ಈ ದೇಶದ ಅರ್ಧ ಹೊಟ್ಟೆಗಳಿಗೆ ಅನ್ನ ಕೊಡಬಲ್ಲದು... ನನಗೆ ಚಳಿಗಾಲದಲ್ಲಿ ಅಂಗೈ ಅಗಲ ಬಟ್ಟೆಯಿಲ್ಲದೆ ನಡುಗುವ ಹಸುಳೆಗಳನ್ನು ನೋಡಿ ಭಯವಾಗುತ್ತದೆ; ತಮ್ಮ ಸನಾತನಿಗಳ ಮಂತ್ರಗಳ ಗದ್ದಲಗಳಿಂದ ಕಿವುಡಾದ ಹೊಟ್ಟೆಗಿಲ್ಲದ ಜನ ನೋಡಿ ನನ್ನ ದಿಗ್ಭ್ರಮೆ ಇಮ್ಮಡಿಯಾಗುತ್ತದೆ" (ಪು. ೪೫, ೪೭).

ಈ ಮಾತುಗಳ ಹಿಂದಿನ ಧ್ವನಿಯನ್ನು ಗಮನಿಸಿದರೆ, ಬಸವಣ್ಣ ಯಾವುದರ ಪರ ಮತ್ತು ಯಾವುದರ ವಿರುದ್ಧ ತನ್ನ ಆಯುಷ್ಯವನ್ನು ಕಳೆದ ಎಂಬುದು ತಿಳಿಯುತ್ತದೆ. ಇವೆಲ್ಲವನ್ನು ತನ್ನ ಗರ್ಭದಲ್ಲಿಟ್ಟುಕೊಂಡು ನಮ್ಮ ವಿವೇಕವನ್ನು ವಿಸ್ತರಿಸುವ ಸಂಕ್ರಾಂತಿ ಈ ಎಲ್ಲ ದೃಷ್ಟಿಗಳಿಂದ ನಮ್ಮ ಕನ್ನಡ ಸಾಹಿತ್ಯದ ವಿಕಾಸ ಯಾತ್ರೆಯಲ್ಲಿ ಚಾರಿತ್ರಿಕ ಮಹತ್ವವನ್ನು ಪಡೆದಿದೆ.

* * *

**ನಾಟಕಕಾರರ ಪರಿಚಯ :**

ಪಿ. ಲಂಕೇಶ (೧೯೩೫–೨೦೦೦) ಅವರು ಕನ್ನಡದ ನವ್ಯ ಲೇಖಕರೆಂದು ಹೆಸರಾದವರು. ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಇಂಗ್ಲೀಷ ಅಧ್ಯಾಪಕರಾಗಿದ್ದ ಲಂಕೇಶ ತಮ್ಮ ಕೆಲಸಕ್ಕೆ ರಾಜಿನಾಮೆ ಕೊಟ್ಟು, ಸಿನಿಮಾ ಮಾಡಲು ಆರಂಭಿಸಿದರು.

ಪಲ್ಲವಿ, ಎಲ್ಲಿಂದಲೋ ಬಂದವರು ಅವರು ನಿರ್ದೇಶಿಸಿದ ಸಿನಿಮಾಗಳು. ೧೯೮೦ ರಲ್ಲಿ ಅವರು ಲಂಕೇಶ ಪತ್ರಿಕೆಯನ್ನು ಪ್ರಾರಂಭಿಸಿ, ಸುಮಾರು ಎರಡು ದಶಕಗಳ ಕಾಲ ಅವರು ಕನ್ನಡ ಪತ್ರಿಕೋದ್ಯಮದಲ್ಲಿ ಪ್ರಭಾವಶಾಲಿಯಾಗಿದ್ದರು. ಅವರು ಪ್ರತಿವಾರವೂ 'ಟೀಕೆ–ಟಿಪ್ಪಣಿ' ಎಂಬ ಹೆಸರಲ್ಲಿ ಬರೆಯುತ್ತಿದ್ದ ಅಂಕಣ ತುಂಬಾ ಓದುಗರನ್ನು ಪಡೆದಿತ್ತು. ಉಮಾಪತಿಯ ಸ್ಕಾಲರ್‌ಶಿಪ್ ಯಾತ್ರೆ, ಕಲ್ಲುಕರಗುವ ಸಮಯ ಪ್ರಸಿದ್ಧ ಕಥಾಸಂಕಲನಗಳು, ಬಿರುಕು, ಮುಸ್ಸಂಜೆ ಕಥಾ ಪ್ರಸಂಗ ಅಕ್ಕ ಎಂಬವು ಕಾದಂಬರಿಗಳು. ಸಂಕ್ರಾಂತಿ, ಗುಣಮುಖ ಮುಂತಾದವು ನಾಟಕಗಳು. ೧೯೯೯ರಲ್ಲಿ 'ಕಲ್ಲುಕರಗುವ ಸಮಯ'ಕ್ಕೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಲಭಿಸಿದೆ. ಕನ್ನಡದ ಶ್ರೇಷ್ಠ ಚಿಂತಕರಲ್ಲಿ ವಿಚಾರವಾದಿಗಳಲ್ಲಿ ಒಬ್ಬರಾಗಿದ್ದಾರೆ.

**ವಿಮರ್ಶಕರ ಪರಿಚಯ :**

ಡಾ. ಚಿಕ್ಕಮಗಳೂರು ಗಣೇಶ ಅವರು ೩೦.೦೮. ೧೯೭೯ರಂದು ಉಡುಪಿ ಜಿಲ್ಲೆ ಕುಂದಾಪುರ ತಾಲ್ಲೂಕಿನ ಸಿದ್ದಾಪುರದಲ್ಲಿ ಜನಿಸಿದರು. ಪ್ರೊ. ಕಾಳೇಗೌಡ ನಾಗವಾರ ಅವರ ಮಾರ್ಗದರ್ಶನದಲ್ಲಿ "ಕುವೆಂಪು ಹಾಗೂ ಶಿವರಾಮ ಕಾರಂತರ ಕಥಾಸಾಹಿತ್ಯದಲ್ಲಿ ಸಾಮಾಜಿಕ ಪ್ರಜ್ಞೆ" ವಿಷಯ ಮೇಲೆ ಪಿಎಚ್.ಡಿ ಪದವಿ ಪಡೆದಿದ್ದಾರೆ. ಪ್ರಸ್ತುತ ಹೊಳೆನರಸೀಪುರದ ಮಹಿಳಾ ಸರ್ಕಾರಿ ಗೃಹ ವಿಜ್ಞಾನ ಕಾಲೇಜಿನಲ್ಲಿ ಕನ್ನಡ ಸಹ ಪ್ರಾಧ್ಯಾಪಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾರೆ. ಪ್ರಸ್ತುತ ಲಂಕೇಶರ ಸಂಕ್ರಾಂತಿ: ವಿಮರ್ಶೆಯ ಮುಖ್ಯ ನೆಲೆಗಳು ಲೇಖನವನ್ನು 'ಹಿಂದಣ ಹೆಜ್ಜೆ ನಿಂದ ಹೆಜ್ಜೆ' ಎಂಬ ಕೃತಿಯಿಂದ ಆರಿಸಿಕೊಳ್ಳಲಾಗಿದೆ.

ಸೃಷ್ಟಿಗೆ ನಮನ, ಒಲವ ಸುವ್ವಾಲಿ (ಕಾವ್ಯ); ಕೇಡಿಲ್ಲದ ಹಾಡು (ಚಿಂತನ ಸಂಪುಟ); ಬಯಲ ಗಾಳಿಯ ಹಿಡಿದು (ಸಂಶೋಧನೆ); ಸಂತಕವಿ ಕನಕದಾಸರು (ಜೀವನ ಚರಿತ್ರೆ); ನೆಲದ ನೆನಪು (ಜಾನಪದ ಸಂಶೋಧನೆ); ಅಕ್ಷರ–ಅಧಿಕಾರ ಪ್ರಕಟಗೊಂಡಿವೆ.

೨೦೦೫ ಮತ್ತು ೨೦೧೭ರಲ್ಲಿ ಎರಡು ಬಾರಿ ಸಂಕ್ರಮಣ ಕಾವ್ಯ ಪುರಸ್ಕಾರ ಪಡೆದಿದ್ದಾರೆ. 'ನೆಲದ ನೆನಪು' ಸಂಶೋಧನ ಕೃತಿಗೆ ೨೦೧೪ನೆಯ ಸಾಲಿನ ಕರ್ನಾಟಕ ಜಾನಪದ ಅಕಾಡೆಮಿ ಪುಸ್ತಕ ಬಹುಮಾನ, 'ಸಂತ ಕವಿ ಕನಕದಾಸರು' ಕೃತಿ ಭಾರತದ ೧೫ ಭಾಷೆಗಳಿಗೆ ಅನುವಾದಗೊಂಡಿದೆ. ಪ್ರಸ್ತುತ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಸದಸ್ಯರಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ.

■■



ಘಟಕ–೫

# ಕೌಶಲ್ಯ ಕನ್ನಡ

## (ಆಡಳಿತ ಕನ್ನಡ)

# ೧೧. ಪತ್ರದ ವಿಧಗಳು : ಖಾಸಗಿ, ಅರೆಸರ್ಕಾರಿ, ಸರ್ಕಾರಿ ಪತ್ರದ ಮಾದರಿಗಳು



**ಪತ್ರ ಲೇಖನ :**

ಸಾಹಿತ್ಯ ಪ್ರಕಾರಗಳಲ್ಲಿ ಕಾವ್ಯ, ನಾಟಕ, ಕಥೆ ಮೊದಲಾದವು ತುಂಬಾ ಪ್ರಾಚೀನವಾದವು ಮತ್ತು ಪ್ರಸಿದ್ಧವಾದವು ಆಗಿವೆ. ಪತ್ರಲೇಖನವೂ ಬರವಣಿಗೆಯ ಮುಖ್ಯ ಪ್ರಕಾರ. ಪತ್ರ ಲೇಖನಕ್ಕೆ ಸುದೀರ್ಘವಾದ ಇತಿಹಾಸವಿದೆ. ಕಾಳಿದಾಸನ ಮೇಘ ಸಂದೇಶ ಕೃತಿಯಲ್ಲಿ ವಿರಹಿ ಯಕ್ಷ ತನ್ನ ಪ್ರಿಯತಮೆಗೆ ಮೇಘಗಳ ಮೂಲಕವೇ ಸಂದೇಶ ಕಳಿಸುತ್ತಾನೆ. ನಳ–ದಮಯಂತಿಯರು 'ಹಂಸ'ವನ್ನು ಸಂದೇಶವಾಹಕವಾಗಿ ಬಳಸಿದರೆ, ಪ್ರೇಮಿಗಳು ಎಲೆ, ನವಿರಾದ ಬಟ್ಟೆ ಮೊದಲಾದವುಗಳನ್ನು ಬಳಸಿ ಪತ್ರ ರೂಪದಲ್ಲಿ ಬರೆಯುವ ಮೂಲಕ ಭಾವನೆಗಳನ್ನು ವಿನಿಮಯ ಮಾಡಿಕೊಂಡಿರುವುದುಂಟು. ರಾಜರ ಕಾಲದಲ್ಲಿ ರಾಜ ತನ್ನ ಆಡಳಿತ ಸಂಬಂಧಿಯಾದ ಅನೇಕ ವಿಚಾರಗಳನ್ನು ತನ್ನ ಕೈಕೆಳಗಿನ ಸಾಮಂತ, ಮಾಂಡಲೀಕರಿಗೆ ತಿಳಿಸಲು ಪತ್ರಗಳ ಮೊರೆ ಹೋಗುತ್ತಿದ್ದರು. ಇದು ನಮ್ಮ ಎದುರಿಗೆ ಇರುವವರ ಜೊತೆ ಸಂಭಾಷಣೆ ನಡೆಸಿದಂತೆ ದೂರದಲ್ಲಿರುವ ವ್ಯಕ್ತಿಗಳ ಜೊತೆ ಮಾತುಕತೆಗೆ, ಪರಸ್ಪರ ವಿಚಾರ ವಿನಿಮಯಕ್ಕೆ ಬಳಕೆಯಾಗುವ ಪರಿಣಾಮಕಾರಿಯಾದ ಸಾಧನ ಪತ್ರ.

**ಪತ್ರದ ವಿಧಗಳು :**

೧. ಖಾಸಗಿ ಪತ್ರಗಳು ಅಥವಾ ವೈಯುಕ್ತಿಕ ಪತ್ರಗಳು
೨. ಅರೆಸರ್ಕಾರಿ ಪತ್ರಗಳು
೩. ಸರ್ಕಾರಿ ಪತ್ರಗಳು
೪. ವ್ಯವಹಾರಿಕ ಪತ್ರಗಳು



ಸ್ವಂತ ವಿಚಾರ, ವಿವರಗಳನ್ನು ಒಳಗೊಂಡ ಪತ್ರಗಳು ಖಾಸಗಿ ಪತ್ರ ಅಥವಾ ವೈಯುಕ್ತಿಕ ಪತ್ರಗಳಾದರೆ, ವ್ಯವಹಾರ ಆಡಳಿತ ಸಂಬಂಧಿ ಪತ್ರಗಳು ವ್ಯವಹಾರಿಕ ಪತ್ರಗಳು. ಗೊತ್ತುಪಡಿಸಿದ ಸ್ವರೂಪ ಮತ್ತು ಭಾಷೆಯನ್ನು ಬಳಸಿಕೊಂಡು ಅಧಿಕೃತ ಉದ್ದೇಶಕ್ಕಾಗಿ ಬರೆಯಲಾದ ಪತ್ರಗಳು ಸರ್ಕಾರಿ ಪತ್ರಗಳಾದರೆ, ಕೆಲವು ಸಂದರ್ಭಗಳಲ್ಲಿ ಅತ್ಯಂತ ಜರೂರಾಗಿ ಅಧಿಕಾರಿಯ ಗಮನವನ್ನು ಸೆಳೆದು ಪರಿಶೀಲನೆ ನಡೆಸಲು ಇತರ ಅಧಿಕಾರಿಗಳು ಪತ್ರ ಬರೆಯುವುದುಂಟು. ಅಲ್ಲದೇ ಸರ್ಕಾರಿ ಆಧೀನ ಸಂಸ್ಥೆಗಳಿಂದ ಬರೆಯಲಾಗುವ ಪತ್ರಗಳನ್ನು ಅರೆ ಸರ್ಕಾರಿ ಪತ್ರಗಳೆನ್ನಲಾಗುವುದು.

**ಖಾಸಗಿ ಪತ್ರಗಳು :**

ಖಾಸಗಿ ಪತ್ರಗಳಲ್ಲಿ ಭಾವನೆಗಳಿಗೆ ಹೆಚ್ಚು ಒತ್ತು. ಖಾಸಗಿ ಪತ್ರ ಸಾಮಾನ್ಯವಾಗಿ ವೈಯಕ್ತಿಕ ವಿಷಯಗಳಿಗೆ ಸಂಬಂಧಿಸಿದ್ದು, ಒಬ್ಬ ವ್ಯಕ್ತಿಯಿಂದ ಇನ್ನೊಬ್ಬರಿಗೆ ಕಳುಹಿಸಲಾಗುತ್ತದೆ. ಖಾಸಗಿ ಪತ್ರಗಳು ೧೮ನೇ ಶತಮಾನದಿಂದೀಚೆಗೆ ವೈಯಕ್ತಿಕ ಸಂವಹನದ ಜನಪ್ರಿಯ ರೂಪಗಳಾಗಿವೆ. ಮನುಷ್ಯ ನಾಗರಿಕನಾದಂತೆ, ಆಧುನಿಕ ಸೌಲಭ್ಯಗಳು ಹೆಚ್ಚಾದಂತೆ, ಬದುಕಿನ ರೀತಿ–ನೀತಿಗಳು ಬದಲಾಗುತ್ತಿರುವುದನ್ನು ಕಾಣುತ್ತಿದ್ದೇವೆ. ಉದಾಹರಣೆಗೆ ದೂರವಾಣಿ, ಪೇಜರ್, ಮೊಬೈಲ್, ಕಂಪ್ಯೂಟರ್ ಬಂದ ಮೇಲೆ ಪತ್ರದ ಬರವಣಿಗೆ ಇನ್ನಿಲ್ಲದಂತೆ ಕಡಿಮೆಯಾಯಿತು.

ಜಗತ್ತಿನ ಯಾವುದೇ ಮೂಲೆಯಲ್ಲಿರುವವರನ್ನು ಎಸ್.ಎಂ.ಎಸ್. ಇ–ಮೇಲ್, ವ್ಯಾಟ್ಸಾಪ್, ಇನ್ಸ್ಟಾಗ್ರಾಮಗಳ ಮೂಲಕ ಕ್ಷಣ ಮಾತ್ರದಲ್ಲಿ ಸಂಪರ್ಕಿಸುವ ಸಾಧ್ಯತೆ ಈಗ ಹೆಚ್ಚಾಗಿದೆ. ಆದುದರಿಂದ ಪತ್ರ ಬರೆಯುವವರ ಸಂಖ್ಯೆ ಕ್ಷೀಣಿಸಿದೆ. ಆದರೂ ಪತ್ರ ಸಾಹಿತ್ಯಕ್ಕೆ, ಕೈಬರಹದ ಪತ್ರಗಳಿಗೆ ಅದರದ್ದೆ ಆದ ವಿಶೇಷ ಸ್ಥಾನವಿದೆ, ಮೌಲ್ಯವಿದೆ, ಮಹತ್ವವಿದೆ. ಗಾಂಧಿಜೀ–ರವೀಂದ್ರನಾಥ ಟ್ಯಾಗೋರರ ನಡುವಣ ಪತ್ರ ವ್ಯವಹಾರ, ಎ.ಎನ್. ಮೂರ್ತಿರಾಯರ 'ಪತ್ರಗಳು–ಚಿತ್ರಗಳು' ಇಂಥ ಕೃತಿಗಳು ಪತ್ರಗಳ ಮಹತ್ವವನ್ನು ಎತ್ತಿ ಹಿಡಿಯುತ್ತವೆ. ಪ್ರಸಿದ್ಧ ವ್ಯಕ್ತಿಗಳ ಪತ್ರಗಳನ್ನು ಓದುವಾಗ ಆ ವಿಶೇಷ ಅನುಭವ ಆಗುತ್ತದೆ. ಆತ್ಮೀಯರ ಕೈಬರಹದ ಪತ್ರವನ್ನು ನೋಡುವುದೇ ಒಂದು ಚಂದ, ಓದುವುದು ಆನಂದ. ಕೈಬರಹದ ಪತ್ರ ಆತ್ಮೀಯತೆಯನ್ನು ಹೆಚ್ಚಿಸುತ್ತದೆ, ಪ್ರೀತಿಯನ್ನು ಬೆಳೆಸುತ್ತದೆ, ಸುಂದರ ನೆನಪಾಗಿ ಉಳಿಯುತ್ತದೆ. ಆದುದರಿಂದ ಪತ್ರ ಸಂಸ್ಕೃತಿಯನ್ನು ಉಳಿಸಿ ಬೆಳೆಸುವ ಅಗತ್ಯವಿದೆ. ಕೌಟುಂಬಿಕ, ಆತ್ಮೀಯ ಅಥವಾ ವ್ಯವಹಾರಿಕ ಪತ್ರಗಳಾಗಲಿ ಎರಡರಲ್ಲೂ ಸಾಮಾನ್ಯವಾದ ಕೆಲವು ಲಕ್ಷಣಗಳಿವೆ. ದಿನಾಂಕ, ಪತ್ರದ ಪ್ರಾರಂಭ, ಸಂಬೋಧನೆ, ವಿಷಯ

ನಿರೂಪಣೆ ಅಥವಾ ಪತ್ರದ ಒಡಲು, ಮುಕ್ತಾಯ, ಬರೆದವರ ಸಹಿ ಇವುಗಳೆಲ್ಲ ಯಾವುದೇ ರೀತಿಯ ಪತ್ರದಲ್ಲಾದರೂ ಇರಲೇಬೇಕಾದ ಅಂಶಗಳು.

**ಖಾಸಗಿ ಪತ್ರದ ಮಾದರಿ– ೦೧**

**ಅಮ್ಮನಿಂದ ಮಗಳಿಗೆ ಪತ್ರ**

ಇವರಿಗೆ

ವಿದ್ಯಾ ಬೆಳಗಾಂವಕರ<br>
ಎಸ್.ಎಸ್.ಎಲ್.ಸಿ. (ಬಿ. ವಿಭಾಗ)<br>
ವಿದ್ಯಾ ನಿಕೇತನ ಪ್ರೌಢಶಾಲೆ<br>
ಹಾಸನ

ದಿನಾಂಕ :................

ಪ್ರೀತಿಯ ವಿದ್ಯಾಳಿಗೆ,

ನಾವು ಇಲ್ಲಿ ಆರೋಗ್ಯದಿಂದ ಇದ್ದೇವೆ. ನಿನ್ನೆ ದಿನ ನಿನ್ನ ಪತ್ರ ಬಂದು ತಲುಪಿತು. ನೀವು ಶಾಲೆಯಿಂದ ಪ್ರವಾಸಕ್ಕೆ ಹೋದ ವಿಚಾರ ತಿಳಿದು ಸಂತೋಷವಾಯಿತು. ನೀನು ಹಂಪಿ ನೋಡಿದ ಬಗ್ಗೆ ತುಂಬಾ ಚೆನ್ನಾಗಿ ಬರೆದಿರುವೆ. ನೀನು ಕಳಿಸಿದ ಫೋಟೋಗಳನ್ನು ಮತ್ತು ನೀನು ಬರೆದ ಪತ್ರವನ್ನು ನೋಡಿದ ನಿನ್ನ ಅಪ್ಪ "ನೋಡು, ನಮ್ಮ ಮಗಳು ಎಷ್ಟು ಚೆನ್ನಾಗಿ ಪತ್ರ ಬರೆದಿದ್ದಾಳೆ" ಎಂದು ಮೆಚ್ಚುಗೆ ವ್ಯಕ್ತ ಪಡಿಸಿದರು.

ನೀನು ಪತ್ರವನ್ನು ಬರೆಯುತ್ತಾ ಇರು. ನಿನ್ನ ಬರವಣಿಗೆ ಬಹಳಷ್ಟು ಸುಧಾರಿಸುತ್ತದೆ, ಆರೋಗ್ಯದ ಕಡೆಗೆ ಗಮನ ಕೊಡು, ಅಭ್ಯಾಸದತ್ತ ಒಲವು ಇರಲಿ, ವ್ಯರ್ಥವಾಗಿ ಸಮಯ ಕಳೆಯಬೇಡ, ಚೆನ್ನಾಗಿ ಊಟ ಮಾಡು, ಆಟ ಆಡು, ನಿದ್ರೆ ಮಾಡು, ಅದೇ ರೀತಿ ಚೆನ್ನಾಗಿ ಓದಿ ಕೀರ್ತಿ ಸಂಪಾದಿಸಬೇಕು. ನಮ್ಮ ಶ್ರಮಕ್ಕೆ ತಕ್ಕ ಪ್ರತಿ ಫಲ ಇರುತ್ತದೆ ಎಂಬುದನ್ನು ನೆನಪಿಡು. ಆಗಾಗ ಪತ್ರ ಬರೆಯುತ್ತಿರು. ನಿನಗೆ ಒಳ್ಳೆಯ ದಾಗಲಿ...

ಶುಭಾಶೀರ್ವಾದಗಳೊಂದಿಗೆ,

ನಿನ್ನ ಪ್ರೀತಿಯ ಅಮ್ಮ<br>
ಶಾರದ



**೨. ಅರೆ ಸರ್ಕಾರಿ ಪತ್ರ :**

ಇಂಗ್ಲೀಷಿನ 'ಡೆಮಿಅಫಿಷಿಯಲ್' ಲೆಟರ್ ಎಂಬುದನ್ನೆ 'ಅರೆ ಸರ್ಕಾರಿ ಪತ್ರ' ಅಥವಾ 'ಅರೆ ಅಧಿಕೃತ ಪತ್ರ' ಎಂಬುದಾಗಿ ಕರೆಯಲಾಗುತ್ತದೆ.

ಅರೆ ಸರ್ಕಾರಿ ಪತ್ರವು ಸರ್ಕಾರಿ ಪತ್ರದ ಒಂದು ವಿಧ. ಸರ್ಕಾರಿ ಪತ್ರದಲ್ಲಿ ಇರುವ ಎಲ್ಲಾ ಅಂಗಗಳು ಯಥಾವತ್ತಾಗಿ ಇದರಲ್ಲಿಯೂ ಇರುತ್ತವೆ. ಆದರೆ ಸರ್ಕಾರಿ ಪತ್ರದಲ್ಲಿ ಒಳ ವಿಳಾಸದಲ್ಲಿ ಅಧಿಕಾರಿಯ ಪದ ನಾಮವನ್ನು ಬರೆಯಲಾಗುತ್ತದೆ. ಉದಾ: ಜಿಲ್ಲಾಧಿಕಾರಿಗಳು, ತಹಶೀಲ್ದಾರರು, ಎಸ್.ಪಿ., ಇತ್ಯಾದಿ. ಆದರೆ ಅರೆ ಸರ್ಕಾರಿ ಪತ್ರದಲ್ಲಿ ಅಧಿಕಾರಿಯ ಹೆಸರಿಗೇ ಪತ್ರ ಬರೆಯಲಾಗುತ್ತದೆ. ಉದಾ: ಅರಣ್ಯ ಸಂರಕ್ಷಣಾಧಿಕಾರಿಗಳು, ಬಂಡೀಪುರ ಎಂದು ಬರೆದರೆ ಅಧಿಕೃತ ಪತ್ರ ಶ್ರೀ ವಿಜಯ್, ವಲಯ ಅರಣ್ಯಾಧಿಕಾರಿಗಳು, ಬಂಡೀಪುರ ಎಂದು ಬರೆದರೆ ಅದು ಅರೆ ಅಧಿಕೃತ ಪತ್ರ, ಹೀಗೆ ಬರೆಯುವಾಗ 'ಆತ್ಮೀಯ' ಎಂಬ ಪದವನ್ನು ಬಳಸುವುದುಂಟು. ಆತ್ಮೀಯ ಪದ ಬಳಕೆ ಹಾಗೂ ವ್ಯಕ್ತಿಯ ಹೆಸರು ಬಳಸಿ ಪತ್ರ ಬರೆಯುವುದರಿಂದ ಇದು ವೈಯುಕ್ತಿಕ ಪತ್ರದ ಲಕ್ಷಣವನ್ನು ಪಡೆಯುತ್ತದೆ. ಆದರೆ ಪತ್ರದ ಒಳಗಿನ ವಿಷಯ ಆಡಳಿತಕ್ಕೆ ಸಂಬಂಧಪಟ್ಟಿದ್ದು ಆಗಿರುವುದರಿಂದ ಇದು ಅಧಿಕೃತ ಪತ್ರವಾಗಿರುತ್ತದೆ. ಅರ್ಧ ವೈಯುಕ್ತಿಕವೂ, ಅರ್ಧ ಅಧಿಕೃತವೂ ಆದುದರಿಂದ ಇದನ್ನು 'ಅರೆ ಅಧಿಕೃತ ಪತ್ರ'ವೆಂದು ಕರೆಯಲಾಗುತ್ತದೆ.

ಅರೆ ಸರ್ಕಾರಿ ಪತ್ರ ರಚನೆಗೆ ಅಧಿಕಾರಿಯ ಕಛೇರಿಯ ತಲೆಬರಹ (ಲೆಟರ್ ಹೆಡ್) ಬಳಸಬೇಕು. ಇದರಲ್ಲಿ ಅಧಿಕಾರಿಯ ಹೆಸರು, ಹುದ್ದೆ, ಸ್ಥಳ, ದಿನಾಂಕಗಳ ವಿವರ ವಿರುತ್ತದೆ. ಈ ಬಗೆಯ ಮುದ್ರಿತ ತಲೆ ಬರಹ ಇಲ್ಲದಿದ್ದಲ್ಲಿ ಇದೇ ರೀತಿಯಾಗಿ ಬೆರಳಚ್ಚು ಮಾಡಿ (ಟೈಪ್) ಪತ್ರ ಬರೆಯಬೇಕು. ಒಳ ವಿಳಾಸವನ್ನು ಬರೆಯಬೇಕಾದ ಸ್ಥಳದಲ್ಲಿ ಒಳ ವಿಳಾಸ ಬರೆಯದೆ, ಪತ್ರದ ವಿಷಯ ಮುಗಿದ ಮೇಲೆ ಒಳ ವಿಳಾಸ ಬರೆಯಬೇಕು. ಕೇವಲ ಹುದ್ದೆಯ ವಿವರ ಸಹಿತವಾದ ವಿಳಾಸ ಬರೆಯದೆ, ಅಧಿಕಾರಿಯ ಹೆಸರು ಹುದ್ದೆಯ ವಿವರ ಬರೆಯಬೇಕು. ಸಾಂಪ್ರದಾಯಿಕವಾದ 'ಮಾನ್ಯರೆ' ಸಂಬೋಧನೆಯ ಬದಲು ಆತ್ಮೀಯರೆ/ ಸಹೃದಯರೆ/ ಪ್ರಿಯ ಬಂಧು ಎಂದು ಬರೆಯಬೇಕು. ಈ ಗೌರವ ಸಂಬೋದನೆಯ ಚರಣದ ಮೇಲು ಭಾಗದಲ್ಲಿ ಅರೆ ಸರ್ಕಾರಿ ಪತ್ರ ಎಂದೂ ನಮೂದಿಸಬೇಕು. ಗೌರವ ಸಂಬೋಧನೆ ಅನಂತರ ವಿಷಯಸೂಚಿ, ಉಲ್ಲೇಖಗಳಿರಬೇಕು. ಮುಕ್ತಾಯದಲ್ಲಿ Yours faithfully ಬದಲಾಗಿ ಇಂಗ್ಲಿಷ್ನಲ್ಲಿಯೂ Yours sin-

cerely ಬಳಸುವುದುಂಟು. ಕನ್ನಡದಲ್ಲಿ ತಮ್ಮ ವಿಶ್ವಾಸಿ ಬಳಸಬೇಕು. ಸಹಿ, ಹುದ್ದೆಯ ವಿವರಗಳೂ ಅಗತ್ಯ. ಬಲಗಡೆ ವಿಳಾಸದಾರರ ಪೂರ್ಣ ವಿಳಾಸ ಬರೆಯಬೇಕು.

ಈ ಬಗೆಯ ಪತ್ರಗಳನ್ನು ಕಛೇರಿಯಲ್ಲಿ ಅಧಿಕಾರಿಗಳೇ ಸ್ವತಃ ಬರೆಯುವುದುಂಟು, ಮುಖ್ಯ ಗುಮಾಸ್ತರೂ ನೆರವು ನೀಡುವುದುಂಟು. ಇವುಗಳನ್ನು ವಿಳಾಸದಾರ ಅಧಿಕಾರಿಯ ಹೊರತಾಗಿ ಮತ್ತೊಬ್ಬರು ತೆರೆಯುವಂತಿಲ್ಲ. ನೇರವಾಗಿ ಅಧಿಕಾರಿಗಳ ಗಮನಕ್ಕೆ ಹೋಗುತ್ತದೆ.

**ಅರೆ ಸರ್ಕಾರಿ ಪತ್ರವನ್ನು ಬರೆಯುವ ಸಂದರ್ಭಗಳು :**

೧. ವಿಷಯವನ್ನು ತುರ್ತಾಗಿ ಸಂಬಂಧಪಟ್ಟ ಅಧಿಕಾರಿಯ ನೇರ ಗಮನಕ್ಕೆ ತರಬೇಕಾದ ಸಂದರ್ಭದಲ್ಲಿ.

೨. ವಿಷಯ ಗೌಪ್ಯವಾಗಿದ್ದು ಅದನ್ನು ಸಂಬಂಧಪಟ್ಟ ಅಧಿಕಾರಿಗೆ ಮಾತ್ರ ತಿಳಿಸಬೇಕಾದಾಗ.

೩. ಸಂಬಂಧಪಟ್ಟ ಅಧಿಕಾರಿಯ ಕೆಲಸವನ್ನು ಶ್ಲಾಘಿಸಬೇಕಾದ ಸಂದರ್ಭದಲ್ಲಿ.

೪. ಸಂಬಂಧಪಟ್ಟ ಅಧಿಕಾರಿ ಅಧಿಕೃತ ಪತ್ರಕ್ಕೆ ಸಕಾಲದಲ್ಲಿ ಉತ್ತರಿಸದೇ ವಿಳಂಬ ಮಾಡಿದ ಸಂದರ್ಭದಲ್ಲಿ.



**ಅರೆ ಸರ್ಕಾರಿ ಪತ್ರ ಮಾದರಿ :**

ದಿನಾಂಕ :....................

ಇವರಿಗೆ,

ಎನ್. ಮೂರ್ತಿ
ಕಾಲೇಜು ಶಿಕ್ಷಣ ಇಲಾಖೆ
ಬೆಂಗಳೂರು

ಆತ್ಮೀಯರೆ,

ನಮ್ಮಕ ಛೇರಿಯ ದಿನಾಂಕ............ ರ ಪತ್ರದ ವಿಷಯವನ್ನು ತಾವು ಜರೂರಾಗಿ ಪರಿಶೀಲಿಸಿ ಕೆಲವು ನೇಮಕಗಳನ್ನು ತತ್‌ಕ್ಷಣವೇ ಮಾಡಬೇಕೆಂದು ತಮ್ಮನ್ನು ಮತ್ತೊಮ್ಮೆ ಪ್ರಾರ್ಥಿಸುತ್ತೇನೆ. ಪ್ರಸ್ತುತ ಖಾಲಿಯಿರುವ ಆಂಗ್ಲ ವಿಭಾಗದ ಹುದ್ದೆಗಳಿಗೆ ಬೇಗನೆ ಅಧ್ಯಾಪಕರುಗಳನ್ನು ಬೇರೆಡೆಗಳಿಂದ ವರ್ಗ ಮಾಡಿಯಾಗಲಿ ಇಲ್ಲವೆ ಹೊಸದಾಗಿ ಹಂಗಾಮಿ ನೇಮಕ ಮಾಡಿಯಾಗಲಿ ಆದಷ್ಟು ಬೇಗ ಕಳುಹಿಸಿ ಕೊಡಬೇಕೆಂದು ಕೋರುತ್ತೇನೆ.

ತಾವು ವಿಳಂಬ ಮಾಡಬಾರದಾಗಿ ವಿನಂತಿ,

ನಿಮ್ಮ ನಂಬುಗೆಯ
(ಸಹಿ)
ಡಾ. ಕಾಂತರಾಜು
ಪ್ರಾಚಾರ್ಯರು
ಪ್ರಥಮ ದರ್ಜೆ ಕಾಲೇಜು, ಬೆಂಗಳೂರು

## ಸರ್ಕಾರಿ ಪತ್ರಗಳ ಮಾದರಿಗಳು :

ಸರ್ಕಾರ ತನ್ನ ದೈನಂದಿನ ವ್ಯವಹಾರಗಳನ್ನು ನೆರವೇರಿಸಿಕೊಂಡು ಹೋಗಬೇಕಾದರೆ ಪತ್ರಗಳ ಮೂಲಕ ಅದು ಒಬ್ಬರಿಂದ ಮತ್ತೊಬ್ಬರಿಗೆ ತಲುಪಿಸಬೇಕು. ಅಂತಹ ಪತ್ರಗಳು ಕಾನೂನು ಬದ್ಧವಾಗಿರಬೇಕು. ಅವುಗಳು ಶಾಸಕಾಂಗ, ಕಾರ್ಯಾಂಗ ಮತ್ತು ನ್ಯಾಯಾಂಗಗಳ ವ್ಯಾಪ್ತಿಯಲ್ಲಿರಬೇಕು. ಯೋಜನೆಗಳು, ಸಿಬ್ಬಂದಿವರ್ಗ, ಆಯವ್ಯಯ ಟೆಂಡರ್‌ಗಳು ಇವೆಲ್ಲಾ ಅವುಗಳಲ್ಲಿ ಅಂಗಗಳಿವೆ. ಶಾಂತಿ ಮತ್ತು ಸುವ್ಯವಸ್ಥೆಗಳನ್ನು ಕಾಪಾಡುವಲ್ಲಿ ಚಾಕಚಕ್ಯತೆ ಇರಬೇಕು. ಸರ್ಕಾರ ಜನತೆಯ ಶಿಕ್ಷಣ ಆರೋಗ್ಯ, ಕೈಗಾರಿಕೆ, ವ್ಯವಸಾಯಗಳಲ್ಲಿ ಪ್ರಗತಿ ಸಾಧಿಸಬೇಕು. ಇವುಗಳಿಗೆಲ್ಲಾ ಪತ್ರ ಮಾಧ್ಯಮವೊಂದೆ ಸುಗಮ ಮಾರ್ಗ.

ಹಾಗೆಯೇ ಸರ್ಕಾರಿ ಕೆಲಸಗಳಲ್ಲಿ ಅನೇಕ ಇಲಾಖೆಗಳಿದ್ದು ಅವುಗಳ ಮುಖ್ಯಾಧಿಕಾರಿಗಳು ತಿಳಿಸಿದ ನಿಯಮಗಳಿಗೆ, ಅಧಿನಿಯಮಗಳಿಗೆ ಮತ್ತು ನಿಬಂಧನೆಗಳಿಗೆ ಅನುಸಾರವಾಗಿ ಕೆಲಸ ನಿರ್ವಹಿಸಬೇಕು. ಪ್ರತಿಯೊಂದು ಇಲಾಖೆಯಲ್ಲಿಯೂ ಒಂದು ಮುಖ್ಯ ಕಛೇರಿ ಇದ್ದು, ಅದರಲ್ಲಿ ಮುಖ್ಯ ಅಧಿಕಾರಿ, ಸಹಾಯಕ ಅಧಿಕಾರಿ, ಅಧ್ಯಕ್ಷರು, ಗುಮಾಸ್ಥರು, ಕಿರಿಯ ಸಹಾಯಕರು, ಒಬ್ಬ ಜವಾನರು ಇರುತ್ತಾರೆ. ಒಂದೊಂದು ಇಲಾಖೆಯಿಂದ ಹೊರಬರುವ ಪ್ರತಿಯೊಂದು ಪತ್ರಗಳಿಗೂ ಎಲ್ಲಾ ಸಿಬ್ಬಂದಿಯವರು ಜವಾಬ್ದಾರರಾಗಿರುತ್ತಾರೆ. ಆದ್ದರಿಂದ ಪ್ರತಿಯೊಬ್ಬರೂ ತಮ್ಮದೇ ಆದ ಜವಾಬ್ದಾರಿಯಿಂದ, ಬುದ್ಧಿವಂತಿಕೆಯಿಂದ ತಮ್ಮ ತಮ್ಮ ಕೆಲಸ ನಿರ್ವಹಿಸಬೇಕಾಗುತ್ತದೆ.

### ಸರ್ಕಾರಿ ಪತ್ರದ ಅಂಗಗಳು

೧. ಶಿರೋನಾಮೆ
೨. ಒಳ ವಿಳಾಸ
೩. ಗೌರವ ಸಂಬೋಧನೆ
೪. ಪತ್ರದ ವಿಷಯ
೫. ಗೌರವ ಮುಕ್ತಾಯ ಸಹಿ, ಹುದ್ದೆಯ ಸೀಲು
೬. ಜೊತೆ ಪತ್ರಗಳು–ವಿಷಯ ಸೂಚಿ–ಕಿರು ಸಹಿಗಳು



## ಸರ್ಕಾರಿ ಪತ್ರದ ಮಾದರಿ :

**ಕರ್ನಾಟಕ ಸರ್ಕಾರ**

ಪತ್ರ ಸಂಖ್ಯೆ............./೦೧–೨೪

ಅಸಿಸ್ಟೆಂಟ್ ಕಮೀಷನರವರ ಕಛೇರಿ
ಚಿಕ್ಕೋಡಿ ಉಪ–ವಿಭಾಗ
ಚಿಕ್ಕೋಡಿ
ದಿನಾಂಕ...............

ಜಿಲ್ಲಾಧಿಕಾರಿಯವರು
ಬೆಳಗಾವಿ
– ಇವರಿಗೆ

ಮಾನ್ಯರೇ,

ತಾವು ದಿನಾಂಕ............. ರಂದು ಬರೆದ ಕ್ರಮ ಸಂಖ್ಯೆ............. ಪತ್ರದ ಪ್ರಕಾರ ನಮ್ಮ ಕಛೇರಿಯ ಮೊದಲನೆಯ ದರ್ಜೆ ಗುಮಾಸ್ತರಾದ ಶ್ರೀ ನಾರಾಯಣ ಎಂ. ಅವರ ಸೇವಾ ಪುಸ್ತಕವನ್ನು ತಮ್ಮ ಅವಗಾಹನೆಗೆ ಕಳುಹಿಸಿಕೊಟ್ಟಿರುತ್ತೇನೆ.

ತಮ್ಮ ವಿಶ್ವಾಸಿ
(ಸಹಿ).......
ಸಹಾಯಕ ಉಪ–ವಿಭಾಗಾಧಿಕಾರಿ
ಚಿಕ್ಕೋಡಿ

■■

# ೧೨. ಸರ್ಕಾರದ ಆದೇಶ, ಸುತ್ತೋಲೆ, ಅಧಿಸೂಚನೆಯ ಮಾದರಿಗಳು



**ಆದೇಶ :**

ಸರಕಾರಿ ಆದೇಶಗಳು ಸಕ್ಷಮ ಪ್ರಾಧಿಕಾರ ಅಥವಾ ಸಕ್ಷಮ ಅಧಿಕಾರಿ ತನ್ನ ಕೆಳಗಿನ ಇಲಾಖೆ ಅಥವಾ ಉದ್ಯೋಗಿಗಳಿಗೆ ಹೊರಡಿಸುವ ನಿರ್ದೇಶನಗಳು ಅಥವಾ ಸೂಚನೆಗಳು ಆದೇಶಗಳಾಗಿವೆ. ಆದೇಶವನ್ನು ಸ್ವೀಕರಿಸುವ ವ್ಯಕ್ತಿಯು ಈ ಆದೇಶಗಳನ್ನು ಅನುಸರಿಸಬೇಕಾಗುತ್ತದೆ. ಇಲಾಖೆಯ ಕೆಳ ಹಂತದಲ್ಲಿ ಕೆಲಸ ಮಾಡುವ ಉದ್ಯೋಗಿಗಳು ಸಕ್ಷಮ ಅಧಿಕಾರಿ ಹೊರಡಿಸುವ ಆದೇಶಗಳಿಗೆ ಬದ್ಧರಾಗಿರಬೇಕಾಗುತ್ತದೆ. ಇಲ್ಲವಾದಲ್ಲಿ ಕಾನೂನು ರೀತ್ಯ ಶಿಕ್ಷೆಗೆ ಅಥವಾ ದಂಡನೆಗೆ ಗುರಿಯಾಗಬೇಕಾಗುತ್ತದೆ.

ಸರ್ಕಾರದ ದೈನಂದಿನ ಆಡಳಿತದಲ್ಲಿ ಅನೇಕ ವಿಷಯಗಳ ಬಗ್ಗೆ ಪ್ರಸ್ತಾಪ ಬರುತ್ತಿರುತ್ತದೆ. ಕೆಲವೊಂದು ವಿಷಯಗಳ ಬಗ್ಗೆ ತೀರ್ಮಾನ ಕೈಗೊಳ್ಳುವುದು ಕೇವಲ ಉನ್ನತ ಸ್ತರದಲ್ಲಿ ಮಾತ್ರ ಸಾಧ್ಯ. ಸಾರ್ವಜನಿಕ ನೀತಿಗೆ ಸಂಬಂಧಿಸಿದಂತಹ ಅಥವಾ ಮಹತ್ವದ ವಿಷಯ ಎಂದು ಪರಿಗಣಿಸಲಾದ ವಿಷಯಗಳಿಗೆ ಸಂಬಂಧಿಸಿದಂತೆ ತೀರ್ಮಾನ ಕೈಗೊಳ್ಳುವುದು ಹಾಗೂ ಆದೇಶಗಳನ್ನು ಹೊರಡಿಸುವುದು ನಡೆಯುತ್ತಲೇ ಇರುತ್ತದೆ. ಇಂತಹ ತೀರ್ಮಾನಗಳನ್ನು ಒಳಗೊಂಡ ಪತ್ರರೂಪವನ್ನು ಆದೇಶ ಎಂದು ಕರೆಯಲಾಗುತ್ತದೆ.

**ಸುತ್ತೋಲೆ :**

ಒಂದೇ ವಿಷಯವನ್ನು ಅನೇಕ ಇಲಾಖೆಗಳಿಗೆ ಅಥವಾ ಅನೇಕರಿಗೆ ತಿಳಿಸಬೇಕಾಗಿ ಬಂದಾಗ ಸುತ್ತೋಲೆಯನ್ನು ಹೊರಡಿಸಲಾಗುತ್ತದೆ. ಹೀಗಾಗಿ, ಇದರಲ್ಲಿ ನಿರ್ದಿಷ್ಟ ವಿಳಾಸಗಳನ್ನೆಲ್ಲ ನಮೂದಿಸಲು ಸಾಧ್ಯವಾಗುವುದಿಲ್ಲ. ಆದ್ದರಿಂದ ಈ ಸಂಬಂಧವಾಗಿ ಕೊನೆಯಲ್ಲಿ ಒಂದು ಸಾಮಾನ್ಯ ಸೂಚನೆ ಇರುತ್ತದೆ.



೧. ಎಲ್ಲ ಇಲಾಖಾ ಮುಖ್ಯರಿಗೆ
೨. ಎಲ್ಲ ವೇತನ ಬಟವಡೆ ಅಧಿಕಾರಿಗಳಿಗೆ
೩. ಎಲ್ಲ ಜಿಲ್ಲಾ ಖಜಾನೆಯ ಅಧಿಕಾರಿಗಳಿಗೆ
೪. ಎಲ್ಲ ರೆವಿನ್ಯೂ ಅಧಿಕಾರಿಗಳಿಗೆ

ಪತ್ರ ಶೀರ್ಷಿಕೆಯ ಭಾಗ ಮುಗಿದ ನಂತರ 'ಸುತ್ತೋಲೆ' ಎಂಬ ಮಾತು ಎದ್ದು ಕಾಣುವಂತೆ ನಮೂದಿತವಾಗಿರುತ್ತದೆ ಎಂಬುದನ್ನು ಬಿಟ್ಟರೆ, ಉಳಿದಂತೆ ಇದು ಸಾಮಾನ್ಯ ಅಧಕೃತ ಪತ್ರದಂತೆಯೇ ಇರುತ್ತದೆ. ಕೆಲವು ವೇಳೆ ವಿಷಯ ಮತ್ತು ಉಲ್ಲೇಖ ಸಂಬಂಧವಾದ ನಮೂದುಗಳು ಇರದೆ ನೇರವಾಗಿ ಸಂಬಂಧಪಟ್ಟ ವಿಷಯವೇ ಒಂದೆರೆಡು ವಾಕ್ಯಗಳಲ್ಲಿ ನಿರೂಪಿತವಾಗಿಬಿಟ್ಟಿರಬಹುದು.

**ಅಧಿಸೂಚನೆ :**

ಶಾಸನ ಸಭೆಗಳು ಆಗಿಂದಾಗ್ಗೆ ರೂಪಿಸುವ ನಿಯಮಗಳು, ತಿದ್ದುಪಡಿಗಳು, ಕಾಯ್ದೆಗಳು, ಗೆಜೆಟೆಡ್ ಅಧಿಕಾರಿಗಳ ನೇಮಕ, ಸ್ಥಿರೀಕರಣ, ಬಡ್ತಿ, ಹಿಂಬಡ್ತಿ, ಸೇವಾವಧಿ ವಿಸ್ತರಣೆ, ವರ್ಗಾವಣೆ, ತರಬೇತಿ, ನಿಯೋಗ, ರಜೆ ಮಂಜೂರಾತಿ ಈ ಸಂಬಂಧವಾದ ಅಧಿಕೃತವಾದ ಪ್ರಕಟಣೆಗಳನ್ನು ಅಧಿಸೂಚನೆಗಳೆಂದು ಕರೆಯಲಾಗುತ್ತದೆ. ಇದರಲ್ಲಿ ಅಧಿಕಾರಿಯ ಸಹಿ ಮತ್ತು ಹುದ್ದೆಗೆ ಸಂಬಂಧವಾದ ವಿವರಗಳು ಮಾತ್ರ ಇರುತ್ತವೆ.

ಇಂಥ ಅಧಿಸೂಚನೆಗಳ ಪ್ರಕಟಣೆಗಳಿಗೆ ಸರ್ಕಾರ ಅಥವಾ ಕಾನೂನುಬದ್ಧವಾಗಿ ಸ್ಥಾಪಿತವಾದಂಥ ಸಂಸ್ಥೆ ತನ್ನದೇ ಆದ ಮುಖ ಪತ್ರಿಕೆಯನ್ನು ಹೊಂದಿರಬಹುದು ಉದಾಹರಣೆಗೆ 'ಕರ್ನಾಟಕ ಸರ್ಕಾರದ ರಾಜ್ಯಪತ್ರ', 'ಮೈಸೂರು ವಿಶ್ವವಿದ್ಯಾನಿಲಯದ ಗೆಜೆಟ್ಟು' ಇತ್ಯಾದಿ. ಇಂಥ ಮುಖ ಪತ್ರಿಕೆಗಳ ಪ್ರಸಾರ ಸಂಖ್ಯೆ ಹಾಗೂ ಅದರ ಫಲವಾದ ಪ್ರಚಾರವು ಸೀಮಿತ ಮತ್ತು ಖಚಿತವಾಗಿರುವುದರಿಂದ ಅನೇಕ ಸಂದರ್ಭಗಳಲ್ಲಿ ಸರ್ಕಾರ ಅಥವಾ ಸಂಸ್ಥೆ ಇತರ ಪ್ರಚಾರ ಮಾಧ್ಯಮಗಳನ್ನೂ ಪತ್ರಿಕೆಗಳನ್ನು ಬಳಸಿಕೊಳ್ಳಬಹುದು. ಇಷ್ಟಾಗಿಯೂ, ಎಲ್ಲ ಅಧಿಸೂಚನೆಗಳು ಸರ್ಕಾರದ ಅಥವಾ ಸಂಸ್ಥೆಯ ಮುಖ ಪತ್ರಿಕೆಗಳಲ್ಲಿ ಪ್ರಕಟವಾಗಲೇಬೇಕೆಂಬ ನಿಯಮವೇನೂ ಇಲ್ಲ. ಸರ್ಕಾರದ ಗೆಜೆಟೆಡ್ ಅಧಿಕಾರಿಗಳಿಗೆ ಸಂಬಂಧಿಸಿದ ಆಡಳಿತ ಕ್ರಮಗಳು ಹಾಗೂ ವಿಶೇಷ ಸಾರ್ವಜನಿಕ ಮಹತ್ವದ ಸಂಗತಿಗಳು ಮಾತ್ರವೇ ಅವುಗಳಲ್ಲಿ ದಾಖಲೆಗೊಂಡು, ಉಳಿದುವು ಸಂಬಂಧಪಟ್ಟ ವ್ಯಕ್ತಿಗಳ ಅಥವಾ ವಿಷಯದ ಕಡತಗಳಲ್ಲಿಯೇ ಉಳಿಯಬಹುದು.

**ಸರ್ಕಾರಿ ಆದೇಶದ ಮಾದರಿ :**

**ಕರ್ನಾಟಕ ಸರ್ಕಾರ**

ಸಂ.ಇ.ಎಸ್.ಟಿ.ಜಿ.೧೯/೨೦೨೦-೨೧

ವಾಣಿಜ್ಯ ತೆರಿಗೆಗಳ
ಡೆಪ್ಯೂಟಿ ಕಮೀಷನರ್ ಅವರ ಕಛೇರಿ
ಬೆಂಗಳೂರು ನಗರ ವಿಭಾಗ,
ಬೆಂಗಳೂರು

ದಿನಾಂಕ: ....................

**ಕಛೇರಿ ಆದೇಶ**

ವಿಷಯ: ಶ್ರೀ ರಾಮಕೃಷ್ಣ ಟಿ. ಸಹಾಯಕ ವಾಣಿಜ್ಯ ತೆರಿಗೆ ಅಧಿಕಾರಿ (ಸಿ) ವಲಯ ಅವರಿಗೆ ಗಳಿಕೆ-ರಜೆ ಮಂಜೂರಾತಿ ಕುರಿತು

ಉಲ್ಲೇಖ: ಅಕೌಂಟೆಂಟ್ ಜನರಲ್ ಅವರಿಂದ ಬಂದ ರಜೆ ಹಕ್ಕು ಸಂಬಂಧಿತ ಪತ್ರ

(ಕ್ರಮಾಂಕ : ಬಿಸಿಟಿ/ ೧೯/ ದಿನಾಂಕ................)

ಎಂ. ಸಿ. ಎಸ್. ಆರ್. ೧೧೨ನೆಯ ನಿಯಮದ ಪ್ರಕಾರ (ಸಿ) ವಲಯದ ಸಹಾಯಕ ವಾಣಿಜ್ಯ ತೆರಿಗೆ ಅಧಿಕಾರಿಯಾಗಿದ್ದ ಶ್ರೀ ರಾಮಕೃಷ್ಣ ಟಿ. ಇವರಿಗೆ ದಿನಾಂಕ............ ರಿಂದ ದಿನಾಂಕ..................ರವರೆಗೆ (ಎರಡೂ ದಿನ ಸೇರಿ) ೧೦ ದಿನಗಳ ಗಳಿಕೆ ರಜೆಯನ್ನು ಮಂಜೂರು ಮಾಡಲಾಗಿದೆ.

ರಜೆಯ ಅವಧಿಯಲ್ಲಿ ಶ್ರೀ ಲೋಕೇಶ್ ಆರ್. ವಾಣಿಜ್ಯ ತೆರಿಗೆ ಅಧಿಕಾರಿ (ಬಿ) ಅಧಿಕ ವಲಯ, ಬೆಂಗಳೂರು, ಅವರಿಗೆ ತಮ್ಮ ಕರ್ತವ್ಯದ ಜೊತೆಗೆ ಸಹಾಯಕ ವಾಣಿಜ್ಯ ತೆರಿಗೆ ಅಧಿಕಾರಿ (ಸಿ) ವಲಯದ ಅವರ ಕರ್ತವ್ಯಗಳ ಹೆಚ್ಚಿನ ಹೊಣೆಯನ್ನು ವಹಿಸಲಾಗಿದೆ.

(ಸಹಿ)

ವಾಣಿಜ್ಯ ತೆರಿಗೆಗಳ ಡೆಪ್ಯೂಟಿ ಕಮೀಷನರ್
ಬೆಂಗಳೂರು



**ಸುತ್ತೋಲೆ ಮಾದರಿ :**

**ಕರ್ನಾಟಕ ಸರ್ಕಾರ**

ಸಂಖ್ಯೆ :ಸಾ.ಶಿ.ಇ/೮೪/೨೦೧೯-೨೦

ಸಾರ್ವಜನಿಕ ಶಿಕ್ಷಣ ಇಲಾಖೆ
ಮಲ್ಲೇಶ್ವರಂ, ಬೆಂಗಳೂರು-೧೨

**ಸುತ್ತೋಲೆ**

ವಿಷಯ : ಕನ್ನಡ ಮಾಧ್ಯಮದಲ್ಲಿ ಬೋಧನೆ

ಉಲ್ಲೇಖ : ಸಂಬಂಧಪಟ್ಟ ಸರ್ಕಾರಿ ಆದೇಶ/ಸುತ್ತೋಲೆ-೧೨೪.

ರಾಜ್ಯದ ಅನೇಕ ಪ್ರಾಥಮಿಕ ಶಾಲೆಗಳು ಕನ್ನಡ ಮಾಧ್ಯಮದಲ್ಲಿ ಬೋಧನೆ ಮಾಡುವುದಾಗಿ ಬಿ.ಇ.ಓ. ಕಛೇರಿಯಿಂದ ಮಾನ್ಯತೆ ಪಡೆದು ಪ್ರಸ್ತುತ ಇಂಗ್ಲಿಷ್ ಮಾಧ್ಯಮದಲ್ಲಿ ಬೋಧನೆ ಮಾಡುತ್ತಿರುವುದಾಗಿ ದೂರು ಬಂದಿವೆ. ಕನ್ನಡ ಮಾಧ್ಯಮದಲ್ಲಿ ಬೋಧಿಸುವುದಾಗಿ ಅನುಮತಿ ಪಡೆದ ಶಾಲೆಗಳಲ್ಲಿ ಇನ್ನು ಮುಂದೆ ಇಂಗ್ಲಿಷ್ ಮಾಧ್ಯಮದಲ್ಲಿ ಬೋಧನೆ ಮಾಡುವುದು ಕಂಡು ಬಂದಲ್ಲಿ ಅಂಥ ಶಾಲೆಗಳ ಮಾನ್ಯತೆಯನ್ನು ರದ್ದು ಮಾಡಲಾಗುವುದು.

ಸಹಿ
ನಿರ್ದೇಶಕರು
ಸಾರ್ವಜನಿಕ ಶಿಕ್ಷಣ ಇಲಾಖೆ
ಪ್ರಾಥಮಿಕ ಶಿಕ್ಷಣ
(ಸೀಲು)

ಪ್ರತಿಗಳು :-

೧. ಎಲ್ಲ ತಾಲೂಕಿನ ಕ್ಷೇತ್ರ ಶಿಕ್ಷಣಾಧಿಕಾರಿಗಳಿಗೆ
೨. ಬಿ.ಆರ್.ಸಿ. ಮತ್ತು ಸಿ.ಆರ್.ಸಿ ಅಧಿಕಾರಿಗಳಿಗೆ
೩. ಕಛೇರಿ ಪ್ರತಿ

**ಅಧಿಸೂಚನೆಯ ಮಾದರಿ :**

**ಕರ್ನಾಟಕ ಸರ್ಕಾರ**

ಸಂಖ್ಯೆ: ಕೋರಿಕೆ ಸಂಖ್ಯೆ: ಇ.ಪಿ.೧೬೬ ಎಸ್.ಎಲ್.ಬಿ.೨೦೨೩

ಕರ್ನಾಟಕ ಸರ್ಕಾರ ಸಚಿವಾಲಯ,
ಬಹುಮಹಡಿ ಕಟ್ಟಡ,
ಬೆಂಗಳೂರು, ದಿನಾಂಕ: ೧೪/೦೯/೨೦೨೩

**ಅಧಿಸೂಚನೆ**

ಶಾಲಾ ಶಿಕ್ಷಣ ಇಲಾಖೆಯ ಶ್ರೀ ರಾಮಪ್ಪ, ದೈಹಿಕ ಶಿಕ್ಷಣ ಪರಿವೀಕ್ಷಕರು, ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ, ಶಹರ ವಲಯ, ಹುಬ್ಬಳ್ಳಿ ಧಾರವಾಡ ಜಿಲ್ಲೆ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಇವರನ್ನು ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ, ಚಿಕ್ಕೋಡಿ ಇಲ್ಲಿ ಖಾಲಿ ಇರುವ ದೈಹಿಕ ಶಿಕ್ಷಣ ಪರಿವೀಕ್ಷಕರ ಹುದ್ದೆಗೆ ಸಾರ್ವಜನಿಕ ಹಾಗೂ ಆಡಳಿತಾತ್ಮಕ ಹಿತದೃಷ್ಟಿಯಿಂದ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ವರ್ಗಾಯಿಸಿ ಆದೇಶಿಸಿದೆ.

(ಮಾನ್ಯ ಮುಖ್ಯ ಮಂತ್ರಿಯವರಿಂದ ಅನುಮೋದಿಸಲ್ಪಟ್ಟಿದೆ)

ಸಹಿ/ (ಹೆಸರು)
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರೌಢ).
ಶಾಲಾ ಶಿಕ್ಷಣ ಮತ್ತು ಸಾಕ್ಷರತಾ ಇಲಾಖೆ
ಬೆಂಗಳೂರು

ಇವರಿಗೆ,

೧. ಮಹಾಲೇಖಪಾಲರು (ಎಟಿಇ) ಕರ್ನಾಟಕ, ಬೆಂಗಳೂರು.
೨. ಆಯುಕ್ತರು, ಶಾಲಾ ಶಿಕ್ಷಣ ಇಲಾಖೆ, ಬೆಂಗಳೂರು.
೩. ಅಪರ ಆಯುಕ್ತರು, ಶಾಲಾ ಶಿಕ್ಷಣ ಇಲಾಖೆ, ಧಾರವಾಡ.
೪. ಉಪ ನಿರ್ದೇಶಕರು, ಶಾಲಾ ಶಿಕ್ಷಣ ಇಲಾಖೆ, ಧಾರವಾಡ
೫ . ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ, ಶಾಲಾ ಶಿಕ್ಷಣ ಇಲಾಖೆ, ಚಿಕ್ಕೋಡಿ.

■■



# ೧೩. ವಾಣಿಜ್ಯ ವ್ಯವಹಾರದ ಪತ್ರಗಳು ಹಾಗೂ ಅಧ್ಯಯನ ವರದಿಗಳು



ವಾಣಿಜ್ಯ ಕ್ಷೇತ್ರದ ಪತ್ರಗಳಲ್ಲಿ ಹಲವು ವಿಧಗಳಿವೆ. ಭರ್ತಿ ಮಾಡಬೇಕಾದ ರಸೀದಿ, ಸಂದಾಯ ಪತ್ರಗಳಿಂದ ಹಿಡಿದು ವ್ಯವಹಾರ ಸಂಬಂಧವಾಗಿ ಬರೆಯಬಹುದಾದ ವಿವಿಧ ಪತ್ರಗಳಲ್ಲಿ ವೈವಿಧ್ಯತೆಯೇ ಕಂಡುಬರುತ್ತದೆ. ಇವುಗಳನ್ನು ಕೆಲವೊಂದು ವಿಂಗಡಣೆಯಾಗಿ ಮಾಡಿಕೊಳ್ಳಬಹುದು. ವಿಚಾರಣಾ ಪತ್ರಗಳು, ಆದೇಶ ಪತ್ರಗಳು, ಪರಾಮರ್ಶನ ಪತ್ರಗಳು, ಆಕ್ಷೇಪಣೆ ಪತ್ರಗಳು ಇತ್ಯಾದಿ. ಅಲ್ಲದೆ ಬ್ಯಾಂಕುಗಳೊಂದಿಗೆ, ಪತ್ರಿಕಾಲಯಗಳೊಂದಿಗೆ, ವಕೀಲರೊಂದಿಗೆ ಕೆಲವು ಪತ್ರ ವ್ಯವಹಾರವನ್ನೂ ನಡೆಸ ಬೇಕಾಗುತ್ತದೆ. ಈ ಎಲ್ಲ ಸಂದರ್ಭಗಳಲ್ಲಿ ಬರೆಯಬಹುದಾದ ಮೇಲ್ಕಂಡ ಪತ್ರಗಳ ಸ್ವರೂಪವನ್ನು ವ್ಯವಹಾರಿಕ ಪತ್ರಗಳೆಂದು ಕರೆಯಲಾಗುತ್ತದೆ.

**ವಿಚಾರಣಾ ಪತ್ರ ೧:**

ಬಿ.ಕಾಂ. ಪದವೀಧರನಾದ ವಿದ್ಯಾರ್ಥಿಯೊಬ್ಬನು ಎಂ.ಕಾಂ. ವ್ಯಾಸಂಗದ ಬಗ್ಗೆ ದೊರೆಯುಬಹುದಾದ ಸೌಲಭ್ಯಗಳು, ಇರುವ ನಿಯುಮಗಳು ಮೊದಲಾದವುಗಳನ್ನು ತಿಳಿಯಲು ಕರ್ನಾಟಕ ವಿಶ್ವವಿದ್ಯಾಲಯದ ರಿಜಿಸ್ಟ್ರಾರ್ ರವರಿಗೆ ಪ್ರಾರ್ಥಿಸಿಕೊಂಡ ಪತ್ರ.

**ವಿಚಾರಣಾ ಪತ್ರದ ಮಾದರಿ :**

ಶಿವಕುಮಾರ ಹಂಜಿ ಬಿ.ಕಾಂ.
ನಂ. ೧೯/ ಖಡೇಬಜಾರ
ಬೆಳಗಾವಿ
ದಿನಾಂಕ.........

ಇವರಿಗೆ,
ರಿಜಿಸ್ಟ್ರಾರ್‌ರವರು
ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ–೦೩

ಮಾನ್ಯರೇ,

ನಾನು ಬೆಳಗಾವಿಯ ರಾಣಿ ಚನ್ನಮ್ಮ ವಿಶ್ವವಿದ್ಯಾಲಯದ ೨೦೦೭–೦೮ನೇ ಸಾಲಿನಲ್ಲಿ ಬಿ.ಕಾಂ. ಪದವಿ ಪರೀಕ್ಷೆಗೆ ಕುಳಿತು ಪ್ರಥಮ ದರ್ಜೆಯಲ್ಲಿ ಪಾಸಾಗಿರುವೆನೆಂದು ತಿಳಿಸಲು ಸಂತೋಷ ಪಡುತ್ತೇನೆ.

ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ನಾನು ಎಂ.ಕಾಂ. ಪದವಿಯ ವ್ಯಾಸಂಗವನ್ನು ಮುಂದುವರಿಸಬೇಕು ಎಂದಿದ್ದೇನೆ. ಈ ಪದವಿಯ ವ್ಯಾಸಂಗದ ಬಗ್ಗೆ ತಮ್ಮ ವಿಶ್ವವಿದ್ಯಾಲಯದಲ್ಲಿ ದೊರೆಯಬಹುದಾದ ಸೌಲಭ್ಯಗಳ, ವಿದ್ಯಾರ್ಥಿವೇತನ, ಹಾಸ್ಟೆಲ್, ಪಠ್ಯಕ್ರಮ, ಮೊದಲಾದವುಗಳ ಬಗ್ಗೆ ವಿವರಗಳನ್ನು ತಿಳಿಸಬೇಕೆಂದು ತಮ್ಮ ವಿಶ್ವವಿದ್ಯಾಲಯದ ನಿಬಂಧನಾ ಸೂಚಿ (ಪ್ರಾಸ್ಪೆಕ್ಟಸ್) ಪ್ರತಿಯೊಂದನ್ನೂ ಕಳುಹಿಸಿಕೊಡಬೇಕೆಂದು ಪ್ರಾರ್ಥಿಸುತ್ತೇನೆ.

ನನ್ನ ವಿಳಾಸದ ಅಂಚೆಯ ಲಕೋಟೆಯೊಂದನ್ನು ಈ ಪತ್ರದೊಂದಿಗೆ ಕಳುಹಿಸಿರುತ್ತೇನೆ. ತಮ್ಮಿಂದ ಉತ್ತರಕ್ಕಾಗಿ ನಿರೀಕ್ಷಿಸುತ್ತೇನೆ.

ವಂದನೆಗಳೊಂದಿಗೆ

ತಮ್ಮ ವಿಶ್ವಾಸಿ
ಶಿವಕುಮಾರ ಹಂಜಿ



**ವಾಣಿಜ್ಯ ವ್ಯವಹಾರ ಪತ್ರದ ಮಾದರಿ :**

ದೂರವಾಣಿ ೨೨೨೪೩೧/೩೨

ನಾಲ್ವಾಡ ಬ್ರದರ್ಸ್
ಕಾಕತಿವೇಸ್ ರೋಡ
ಬೆಳಗಾಂವಿ–೦೧
ದಿನಾಂಕ..............

ವ್ಯವಸ್ಥಾಪಕರು
ಸಮಾಜ ಪುಸ್ತಕಾಲಯ
ಶಿವಾಜಿ ಬೀದಿ
ಧಾರವಾಡ

–ಇವರಿಗೆ

ಮಹನೀಯರೇ,

ನೀವು ಇತ್ತೀಚೆಗೆ ಡಾ. ಜಿ.ಎಸ್. ಶಿವರುದ್ರಪ್ಪನವರ 'ಸೌಂದರ್ಯ ಸಮೀಕ್ಷೆ' ಗ್ರಂಥವನ್ನು ದ್ವಿತೀಯ ಮುದ್ರಣ ಮಾಡಿಸಿ ಪ್ರಕಟಿಸಿರುವುದನ್ನು ತಿಳಿದು ಸಂತೋಷವಾಗಿದೆ. ಈ ಗ್ರಂಥದ ಒಂದು ನೂರು ಪ್ರತಿಗಳು ನಮಗೆ ಈಗ ಅಗತ್ಯವಾಗಿ ಬೇಕಾಗಿವೆ.

ತಾವು ಈ ಬಗ್ಗೆ ಕೊಡಬಹುದಾದ ರಿಯಾಯಿತಿ ಮತ್ತು ಸರಬರಾಜು ಮಾಡುವ ವಿಧಾನವನ್ನು ನಮಗೆ ಜರೂರು ತಿಳಿಸಬೇಕಾಗಿ ವಿನಂತಿ. ಹಿಂದೆಯೂ ನಿಮ್ಮಿಂದ ಭಾರಿ ಮೊತ್ತದ ಗ್ರಂಥಗಳನ್ನು ನಾವು ತರಿಸಿ ವಿಕ್ರಯಿಸಿರುವುದುಂಟು. ನಿಮ್ಮ ಸೂಕ್ತ ಜವಾಬನ್ನು ಪರಿಶೀಲಿಸಿ, ನಾವು ಒಡನೆಯೇ ನಿಮಗೆ ಆದೇಶ (ಬೇಡಿಕೆ) ಪತ್ರ ಕಳುಹಿಸುತ್ತೇವೆ.

ತಮ್ಮ ವಿಶ್ವಾಸಿಗಳು
ನಾಲ್ವಾಡ ಬ್ರದರ್ಸ್ ಪರವಾಗಿ
ಯುವರಾಜ
ವ್ಯವಸ್ಥಾಪಕರು

**ಅಧ್ಯಯನದ ವರದಿಗಳು :**

ಇಂಗ್ಲೀಷ್ ಭಾಷೆಯಲ್ಲಿ 'Report' ಎಂದು ಕರೆಯಲಾಗುವ ಬರೆಹವನ್ನು ಅಥವಾ ಮಾಹಿತಿಯನ್ನು ಕನ್ನಡದಲ್ಲಿ 'ವರದಿ' ಎಂದು ಕರೆಯಲಾಗುತ್ತದೆ. ಶಾಲೆಯಲ್ಲಿನ ಮಕ್ಕಳ ವಿದ್ಯಾಭ್ಯಾಸದ ಮುನ್ನಡೆಯನ್ನು ಕುರಿತು ಲಿಖಿತ ಮಾಹಿತಿಯಿಂದ ಹಿಡಿದು ಯಾವುದೇ ಘಟನೆಯ ಬಗೆಗಿನ ಹಿನ್ನಲೆ, ಪರಿಣಾಮ, ಮುನ್ನಚ್ಚರಿಕೆಗಳ ಬಗೆಗಿನ ವಿವರಗಳನ್ನು ಒಳಗೊಂಡಿರುವ, ಉದ್ದೇಶಿಸಲಾಗಿರುವ ಯವುದೇ ಕ್ರಮದ ಬಗೆಗಿನ ಆಳವಾದ ಅಧ್ಯಯನ ಮತ್ತು ವಿಷಯದ ಆಗುಹೋಗುಗಳು, ಅನುಕೂಲ, ಅನನಾಕೂಲ, ಹಿತಕರವಾಗಬಹುದಾದ ಬೆಳವಣಿಗೆಗೆಳು ಅಥವಾ ಪ್ರತಿಕೂಲ ಪರಿಣಾಮಗಳು, ಸಾಧಕ–ಭಾಧಕಗಳು– ಇವುಗಳ ಬಗೆಗಿನ ಮೌಖಿಕ ಅಥವಾ ಲಿಖಿತರೂಪದ ಮಾಹಿತಿಯನ್ನು ವರದಿ ಎಂದು ಕರೆಯಲಾಗುತ್ತದೆ.

ಆಡಳಿತ ವ್ಯವಸ್ಥೆಯಲ್ಲಿ ಮಾತ್ರವಲ್ಲದೆ, ಯಾವುದೇ ಬಗೆಯ ವಾಣಿಜ್ಯ–ವಹಿವಾಟು, ಉದ್ಯಮ, ಸಂಶೋಧನೆ, ತನಿಖೆ, ಯೋಜನೆ, ಕಾರ್ಯಕ್ರಮಗಳನ್ನು ಕೈಗೊಳ್ಳಬೇಕಾದರೂ ಅದಕ್ಕೆ ಸಂಬಂಧಿಸಿದ ಪೂರ್ವಭಾವಿ ಅಧ್ಯಯನ 'ವರದಿ'ಯ ರೂಪದಲ್ಲೇ ಇರುತ್ತದೆ. ಅದಕ್ಕೆ ಸೀಮಿತ ಉದ್ದೇಶವೂ ಇರಬಹುದು. ಸಾರ್ವಜನಿಕ ಹಿತಾಸಕ್ತಿಯನ್ನುಳ್ಳದ್ದು ಅಥವಾ ಆಡಳಿತ ವ್ಯವಸ್ಥೆಯನ್ನು ಬಲಪಡಿಸುವ ವ್ಯಾಪಕ ಉದ್ದೇಶವೂ ಇದಕ್ಕೆ ಇರಬಹುದು. ಸಾರ್ವಜನಿಕ ಹಿತದೃಷ್ಟಿಯಿಂದ ಕೈಗೊಳ್ಳಬೇಕಾಗಿರುವ ಕೆಲವೊಂದು ಕೆಲವೊಂದು ಕ್ರಮಗಳ ವರದಿಯನ್ನು ರಹಸ್ಯವಾಗಿರಿಸಲೂಬಹುದು. ಒಟ್ಟಿನಲ್ಲಿ, ವರದಿಯನ್ನು ತರಿಸಿಕೊಳ್ಳುವುದು ಹಾಗೂ ವರದಿಯನ್ನು ಕಳಿಸಿಕೊಡುವುದು ಸರ್ಕಾರದ ಆಡಳಿತ ವ್ಯವಸ್ಥೆಯ ಒಂದು ಅನಿವಾರ್ಯ ಕಾರ್ಯವೇ ಆಗಿರುತ್ತದೆ. ವರದಿ ಯಾವುದೇ ಬಗೆಯದಾಗಿರಲಿ– ನಿಯತಕಾಲಿಕ ವರದಿಯಾಗಿರಲಿ ಅಥವಾ ವಿಶಿಷ್ಟವೂ ಸೋದ್ದಿಷ್ಟವೂ ಆದುದಾಗಿರಲಿ– ವರದಿಗಾರ ವಿಷಯಕ್ಕೆ ಸಂಬಂಧಿಸಿದ ಅಗತ್ಯವಾದ ಎಲ್ಲ ಮಾಹಿತಿಯನ್ನು ಎಲ್ಲ ಮೂಲಗಳಿಂದಲೂ ಸಂಗ್ರಹಿಸಬೇಕಾಗುತ್ತದೆ; ಅವುಗಳನ್ನು ವ್ಯವಸ್ಥಿತ ರೂಪದಲ್ಲಿ ಮಂಡಿಸಬೇಕಾಗುತ್ತದೆ. ಅಗತ್ಯವಾದಲ್ಲಿ, ವಿಶ್ಲೇಷಣೆ ಮಾಡಬೇಕಾಗುತ್ತದೆ: ಕೆಲವೊಮ್ಮೆ ಸ್ವಂತ ಅಭಿಪ್ರಾಯಗಳನ್ನು ಸೂಚಿಸಬಹುದಾಗಿರುತ್ತದೆ. ಇಂಥ ವರದಿಗಳನ್ನು ಸಿದ್ಧಪಡಿಸುವುದಕ್ಕೆ ಮಾಹಿತಿ ಸಂಗ್ರಹದ, ವಿಷಯ ಮಂಡನೆಯ, ವಿಶ್ಲೇಷಣೆಯ ಕೌಶಲಬೇಕಾಗುತ್ತದೆ. ಎಂಬುದೇನೋ ನಿಜ ಆದರೆ ಕೆಲವು ಸಂದರ್ಭಗಳಲ್ಲಿ ನಿಂತ ಕಾಲಿನಲ್ಲಿಯೇ ವರದಿಯನ್ನು ಸಲ್ಲಿಸಬೇಕಾಗುತ್ತದೆ. ಉದಾ: ಪ್ರಕೃತಿ



ವಿಕೋಪದಂತಹ ಸನ್ನೀವೇಶಗಳು ಎದುರಾದಾಗ ವರದಿ ಕೊಡುವುದು. ಕೆಲವೊಮ್ಮೆ ಮೌಖಿಕ ಅಥವಾ ಬಾಯಿಮಾತಿನ ಸ್ವರೂಪದಲ್ಲಿ ಇರಬಹುದಾದರೂ, ಲಿಖಿತ ಸ್ವರೂಪದಲ್ಲಿರುವಾಗ ಅದಕ್ಕೆ ಖಚಿತತೆಯನ್ನು, ದೀರ್ಘಕಾಲದವರೆಗೆ ಉಳಿದು ಬರುವಂಥ ಸತ್ವವನ್ನು ಹಗೂ ಸದ್ಯೋಪಯುಕ್ತತೆ ಮತ್ತು ಭವಿಷ್ಯೋಪಯುಕ್ತತೆಯ ಗುಣಗಳನ್ನು ತಂದುಕೊಡಬಹುದಾಗಿದೆ. ಹೀಗಾಗಿ, ಲಿಖಿತ ವರದಿ ಹೆಚ್ಚು ವಿಶ್ವಸನೀಯವೂ, ಬೇಕೆಂದಾಗ ಪರಿಶೀಲನಲಭ್ಯವೂ ಆಗಿರುತ್ತದೆ. ಅವಕ್ಕೆ ಐತಿಹಾಸಿಕ ಮಹತ್ವವೂ ಲಭಿಸಿಬಿಡುತ್ತದೆ. ಉದಾಹರಣೆಗೆ, ನಮ್ಮ ಶಿಕ್ಷಣ ವ್ಯವಸ್ಥೆಯಲ್ಲಿ ಭಾಷೆಗಳಿಗೆ ಇರಬೇಕಾದ ಸ್ಥಾನಮಾನಗಳನ್ನು ಕುರಿತ 'ಗೋಕಾಕ್ ವರದಿ' ಹಗೂ ವಿವಿಧ ಕ್ಷೇತ್ರಗಳಲ್ಲಿ ಕನ್ನಡಿಗರಿಗೆ ಲಭಿಸಬೇಕಾಗಿರುವ ಅವಕಾಶಗಳನ್ನು ಕುರಿತ 'ಸರೋಜಿನಿ ಮಹಿಷಿ ವರದಿ.'

ಉದ್ದೇಶ, ರಚನೆ ಮತ್ತು ಸ್ವರೂಪಗಳ ದೃಷ್ಟಿಯಿಂದಲೂ ವರದಿಗಳನ್ನು ವರ್ಗೀಕರಿಸಬಹುದಾಗಿದೆ.

ಅ. ಉದ್ದೇಶದ ದೃಷ್ಟಿಯಿಂದ : ಇದರಲ್ಲಿ ೧) ವಿವರಣಾತ್ಮಕ ವರದಿ

೨) ವಿಶ್ಲೇಷಣಾತ್ಮಕ ವರದಿ

ಆ. ರಚನೆಯ ದೃಷ್ಟಿಯಿಂದ : ಇದರಲ್ಲಿ ೧) ವಿಧ್ಯುಕ್ತ ವರದಿ

೨) ಅನಿರ್ಬಂಧಿತ ವರದಿ

ಇ. ಸ್ವರೂಪದ ದೃಷ್ಟಿಯಿಂದ : ಇದರಲ್ಲಿ ೧) ವ್ಯಕ್ತಿನಿಷ್ಠ ವರದಿ

೨) ಸಾಮೂಹಿಕ ವರದಿ

**೧) ವಿವರಣಾತ್ಮಕ ಹಾಗೂ ವಿಶ್ಲೇಷಣಾತ್ಮಕ ವರದಿಗಳು :**

ವಿವರಣಾತ್ಮಕ ವರದಿಗಳು ವಸ್ತುಸ್ಥಿತಿಯನ್ನಷ್ಟೇ ವಿವರಿಸುತ್ತವೆ. ಈ ವರದಿ ರಚಿಸುವವರು ತಮ್ಮ ವೈಯಕ್ತಿಕ ಅಭಿಪ್ರಾಯವನ್ನಾಗಲಿ, ವಿಷಯದ ಆಧಾರದ ಮೇಲೆ ಮಾಡಬಹುದಾದ ತೀರ್ಮಾನಗಳನ್ನಾಗಲಿ ಕೊಡುವುದಿಲ್ಲ. ಆದರೆ ವಿಶ್ಲೇಷಣಾತ್ಮಕ ವರದಿಗಳು ಹೀಗಲ್ಲ. ವರದಿಗಾರರು ವಿಷಯಗಳನ್ನು ಮಂಡಿಸುವುದಷ್ಟೇ ಅಲ್ಲದೆ ಅವನ್ನು ವಿಶ್ಲೇಷಿಸಿ, ಅವುಗಳಿಂದ ಹೊಮ್ಮುವ ಸಿದ್ಧಾಂತಗಳನ್ನೂ ತಮ್ಮ ಶಿಫಾರಸುಗಳನ್ನೂ ಸಮಸ್ಯೆಗೆ ಪರಿಹಾರಗಳನ್ನೂ ಸೂಚಿಸುತ್ತಾರೆ.

**೨) ಅನಿರ್ಬಂಧ ಹಾಗೂ ವಿಧ್ಯುಕ್ತ ವರದಿಗಳು :**

ಒಂದು ವಿಚಾರದ ಮೇಲೆ ತತ್‌ಕ್ಷಣ ಸ್ಪಷ್ಟವಾದ ವಿಷಯಗಳನ್ನು ಅವು ಸ್ಪಷ್ಟವಾದ ಕ್ರಮದಲ್ಲಿಯೇ ನೇರವಾಗಿ ನಿರೂಪಿಸುವ ವರದಿ ಅನಿರ್ಬಂಧ ವರದಿಯೆಂದು ಹೇಳಬಹುದು. ಇಲ್ಲಿ ವರದಿಗಾರ ತಾನು ನೀಡುತ್ತಿರುವ ವಿವರಗಳನ್ನು ಕ್ರಮಪಡಿಸಿ, ವಿಂಗಡಿಸಿ, ಪರಿವಿಡಿ ಉಪೋದ್ಘಾತ ಮುಂತಾದವುಗಳೊಡನೆ ಕೊಡುವುದಿಲ್ಲ. ಇದರ ಭಾಷೆ ಸಾಮಾನ್ಯವಾಗಿ ಸಂಭಾಷಣೆಯ ಶೈಲಿಯಲ್ಲಿರುತ್ತದೆ. ಇದು ಒಂದೇ ಪುಟದಷ್ಟಿರಬಹುದು; ಅಥವಾ ಹಲವಾರು ಪುಟಗಳಷ್ಟಾಗಬಹುದು.

ಶಿರೋನಾಮೆ, ಪರಿವಿಡಿ, ಉಪೋದ್ಘಾತ, ಪ್ರಕರಣ ಮುಂತಾದ ಹಲವು ಅಂಗಗಳೊಡನೆ ಕ್ರಮಬದ್ಧವಾಗಿ ನೀಡಿದ ವರದಿಯನ್ನು ವಿಧ್ಯುಕ್ತ ವರದಿಯೆನ್ನಬಹುದು. ವಿಧ್ಯುಕ್ತ ವರದಿ ಸಾಮಾನ್ಯವಾಗಿ ವ್ಯಕ್ತಿ ಸ್ವರೂಪಕವಾಗಿರುವುದಿಲ್ಲ. ಇದರಲ್ಲಿ "ನಾನು" "ನಾವು" ಮುಂತಾದ ಪದಗಳ ಪ್ರಯೋಗವಿರುವುದಿಲ್ಲ.

**೩) ವ್ಯಕ್ತಿನಿಷ್ಠ (ಬಿಡಿ) ಹಾಗೂ ಸಾಮೂಹಿಕ (ಸಮಿತಿ) ವರದಿಗಳು :**

ಒಬ್ಬ ವ್ಯಕ್ತಿಯೇ ಒಂದು ವಿಷಯವನ್ನು ಕುರಿತು ವರದಿ ಸಲ್ಲಿಸಬಹುದು. ಅಥವಾ ವಿಷಯವನ್ನು ಕುರಿತು ಕೂಲಂಕಷವಾದ ವಿಚಾರಣೆ ನಡೆಸಲು ಹಲವಾರು ತಜ್ಞರ ಅಥವಾ ವಿಚಾರವಂತರ ಒಂದು ಸಮಿತಿಯನ್ನೇ ಏರ್ಪಡಿಸಬಹುದು. ಒಬ್ಬ ವ್ಯಕ್ತಿಯೇ ಸಾಕೆ, ಅಥವಾ ಹಲವರ ಒಂದು ಸಮಿತಿಯೇ ಬೇಕೆ ಎಂಬುದನ್ನು ವರದಿಮಾಡ ಬೇಕಾದ ವಿಷಯದ ಪ್ರಾಮುಖ್ಯ ಹಾಗೂ ಸಂಕೀರ್ಣತೆಗೆ ಅನುಗುಣವಾಗಿ ನಿರ್ಣಯಿಸಬೇಕಾಗುತ್ತದೆ.

**ವರದಿಯ ಸ್ವರೂಪ ನಿಷ್ಕರ್ಷೆ :**

ವರದಿಯನ್ನು ಯಾವ ರೀತಿ ರಚಿಸಬೇಕೆಂಬುದನ್ನು ತೀರ್ಮಾನಿಸುವ ಮುನ್ನ ವರದಿಗಾರ ಕೆಲವು ಅಂಶಗಳನ್ನು ಪರಿಶೀಲಿಸಬೇಕು. ತನ್ನಿಂದ ನಿರೀಕ್ಷಿಸುವ ವರದಿ ಎಂಥದು? ಎಂಬುದನ್ನು ಅವನು ಮೊದಲು ಅರಿಯಬೇಕು. ಈ ವಿಚಾರವಾಗಿ ಹಿಂದೆ ಯಾರಾದರೂ ವರದಿ ಮಾಡಿದ್ದರೆ ಅದನ್ನು ಅವನು ನೋಡಿ ಈ ಬಗ್ಗೆ ಒಂದು ನಿರ್ಣಯಕ್ಕೆ ಬರಬಹುದು.ವರದಿಯನ್ನು ನೀಡಲು ಗೊತ್ತುಪಡಿಸಿರುವ ಅವಧಿಯಷ್ಟು? ಎಂಬುದನ್ನು ಅವನು ಅರಿತುಕೊಳ್ಳಬೇಕು. ಕೇವಲ ಕೆಲವೇ ದಿನಗಳಲ್ಲಿ ಅವನು ವರದಿ ನೀಡಬೇಕಾಗಿದ್ದರೆ ವರದಿಯ ಅಂಶಗಳನ್ನು ಕ್ರಮವಾಗಿ ವಿಧಿಬದ್ಧವಾಗಿ ನೀಡಲು ಸಾಧ್ಯವಾಗದೆ ಹೋಗಬಹುದು. ಶೀಘ್ರವಾಗಿ ವರದಿ



ಒಪ್ಪಿಸಬೇಕಾಗಿದ್ದರೆ ಅವನು ವಿಷಯವನ್ನು ಆಳವಾಗಿ ವಿವೇಚಿಸುವುದು ಬಹುಶಃ ಸಾಧ್ಯವಾಗದು. ಆಗ ಅವನು ವಿಷಯವನ್ನು ಕುರಿತು ಸ್ಥೂಲವಾಗಿ ಮಾತ್ರ ವರದಿ ನೀಡಬೇಕಾಗುತ್ತದೆ. ವರದಿಯ ಉದ್ದೇಶವೇನು ? ಎಂಬುದನ್ನೂ ಅವನು ತಿಳಿಯಬೇಕು. ಕಿರಿದಾದ ಉದ್ದೇಶಕ್ಕೆ ಹಿರಿದಾದ ವರದಿ ಅಗತ್ಯವಿಲ್ಲ. ಇದಕ್ಕಾಗಿ ವ್ಯಯಮಾಡಿದ ಶ್ರಮ ಕಾಲಗಳು ವ್ಯರ್ಥ. ಆದ್ದರಿಂದಲೇ ಮೊದಲೇ ಅವನು ವರದಿಯ ಉದ್ದೇಶವೇನೆಂಬುದನ್ನು ಅರಿತುಕೊಂಡು ಅನಂತರ ವಿಷಯ ಸಂಗ್ರಹಣೆ, ವಿಶ್ಲೇಷಣೆ ಮುಂತಾದ ಕಾರ್ಯಗಳಿಗೆ ಕೈಹಚ್ಚಬೇಕು.

**ವರದಿಯ ರಚನೆ :**

ತಾನು ನೀಡಬೇಕಾದ ವರದಿಯ ವ್ಯಾಪ್ತಿಯನ್ನೂ ಸ್ವರೂಪವನ್ನೂ ನಿಷ್ಕರ್ಷಿಸಿಕೊಂಡ ಅನಂತರ ವರದಿಗಾರ ವಿಷಯವನ್ನು ಕುರಿತ ಸಂಶೋಧನೆಯ ಕಾರ್ಯವನ್ನು ಆರಂಭಿಸಬೇಕು. ಅವನು ಮೊದಲು ವಿಷಯದ ಮೂಲಗಳನ್ನು ಅರಿತುಕೊಳ್ಳಬೇಕು; ಅನಂತರ ವಿವರಗಳನ್ನು ಗುರುತುಮಾಡಿಕೊಳ್ಳಬೇಕು; ಹೀಗೆ ಸಂಗ್ರಹಿಸಿದ ವಿವರಗಳನ್ನು ವಿಂಗಡಿಸಬೇಕು; ಬರೆಯಬೇಕಾದ ವರದಿಯ ರೂಪರೇಖೆಯನ್ನು ರಚಿಸಿಕೊಳ್ಳಬೇಕು; ಇದರ ಆಧಾರದ ಮೇಲೆ ವರದಿ ರಚಿಸಬೇಕು. ಒಂದು ಒಳ್ಳೆಯ ವರದಿ ಕೆಲವು ಮುಖ್ಯ ಗುಣಗಳನ್ನು ಹೊಂದಿರಬೇಕು. ಅದು ಸ್ಪಷ್ಟವಾಗಿರಲಿ, ಸಂಕ್ಷಿಪ್ತವಾಗಿರಲಿ; ಭಾಷೆ ಸಂಯಮಪೂರಿತವಾಗಿರಲಿ, ಸುಲಭವಾಗಿ ಓದುವಂತಿರಲಿ.

**ಏಕವ್ಯಕ್ತಿಯ ವರದಿ :**

ಒಂದು ಹೊಸ ಉದ್ಯಮದ ಸ್ಥಾಪನೆಯನ್ನು ಕುರಿತು, ಇದರ ಆಗುಹೋಗುಗಳನ್ನು ಪರಿಶೀಲಿಸಿ ನೀಡುವ ವರದಿ ವಾಣಿಜ್ಯ ಪ್ರಪಂಚದಲ್ಲಿ ಬಹು ಸಾಮಾನ್ಯವಾದುದು. ಇದಲ್ಲದೆ ವ್ಯಾಪಾರ ಸಂಸ್ಥೆಯ ಆಂತರಿಕ ವ್ಯವಸ್ಥೆ ಸಮಸ್ಯೆಗಳನ್ನು ಕುರಿತು ನೌಕರ ತನ್ನ ಹಿರಿಯಧಿಕಾರಿಗೆ ಸಲ್ಲಿಸುವ ವರದಿಗಳಿಗೂ ಕೊರತೆಯಿಲ್ಲ. ಇಂಥ ವರದಿಗಳನ್ನು ರಚಿಸುವವರು ಮುಖ್ಯವಾಗಿ ಗಮನಿಸಬೇಕಾದ ಕೆಲವು ವಿಚಾರಗಳಿವೆ. ವರದಿ ವಿಷಯ ಗರ್ಭಿತವಾಗಿರಬೇಕು, ತರ್ಕಬದ್ಧವಾಗಿರಬೇಕು, ಪ್ರಮಾಣ ಪೂರಿತವಾಗಿರಬೇಕು, ಮನವೊಪ್ಪುವಂತಿರಬೇಕು, ಆಕರ್ಷಕವಾಗಿರಬೇಕು. ಅಗತ್ಯವಿದ್ದರೆ ವರದಿಗಾರ ತನ್ನ ಅಭಿಪ್ರಾಯಗಳನ್ನೂ ಸಲಹೆಗಳನ್ನೂ ಸೂಚಿಸಬೇಕು.

■■

ಬಿ.ಎ./ಬಿ.ಎಸ್.ಡಬ್ಲ್ಯೂ ಮೊದಲನೆಯ ಸೆಮಿಸ್ಟರ್ ತರಗತಿಗಳಿಗೆ

## ಪಠ್ಯ: ಸಾಹಿತ್ಯ ಸಂಪ್ರತಿ–೧

## ಮಾದರಿ ಪ್ರಶ್ನೆ ಪತ್ರಿಕೆ ಮತ್ತು ಅಂಕಗಳ ವಿವರ

**ಅವಧಿ: ೩ ಗಂಟೆ** **ಅಂಕಗಳು: ೮೦**

ಪ್ರಶ್ನೆ–೧: ಇಡೀ ಪಠ್ಯಕ್ಕೆ ಅನ್ವಯಿಸಿ ಪ್ರಬಂಧ ಮಾದರಿಯ ೫ ಪ್ರಶ್ನೆಗಳನ್ನು ಕೊಟ್ಟು ೩ಕ್ಕೆ ಉತ್ತರಿಸಲು ಹೇಳುವುದು ೧೦X೩=೩೦

ಪ್ರಶ್ನೆ–೨: ಟಿಪ್ಪಣಿ : ೬ರಲ್ಲಿ ೪ಕ್ಕೆ ಉತ್ತರಿಸಲು ಹೇಳುವುದು (೧,೨,೩,೫ ಘಟಕಗಳಿಗೆ ಸಂಬಂಧಿಸಿ) ೫X೪=೨೦

ಪ್ರಶ್ನೆ–೩: ಸಂದರ್ಭದೊಡನೆ ಸ್ಪಷ್ಟೀಕರಿಸಿ : ೫ರಲ್ಲಿ ೩ಕ್ಕೆ ಉತ್ತರಿಸಲು ಹೇಳುವುದು (೧,೨,೩ ಘಟಕಗಳಿಗೆ ಸಂಬಂಧಿಸಿ) ೫X೩=೧೫

ಪ್ರಶ್ನೆ–೪: ಒಂದೇ ವಾಕ್ಯದ ೧೫ ವಸ್ತುನಿಷ್ಠ ಪ್ರಶ್ನೆಗಳನ್ನು ಕೊಟ್ಟು ಎಲ್ಲಕ್ಕೂ ಉತ್ತರಿಸಲು ಹೇಳುವುದು (ಇಡೀ ಪಠ್ಯಕ್ಕೆ ಸಂಬಂಧಿಸಿ) ೧೫X೧=೧೫

**ವಿಶೇಷ ಸೂಚನೆ : ಆಂತರಿಕ ಅಂಕಗಳು ೨೦.**

೧೦ ಅಂಕದ ಒಂದು ಆಂತರಿಕ ಪರೀಕ್ಷೆ ಅಥವಾ ೫ ಅಂಕಗಳಿಗೆ ಸಂಬಂಧಿಸಿ ಎರಡು ಪರೀಕ್ಷೆಗಳನ್ನು ನಡೆಸುವುದು. ನಿಯೋಜಿತ ಕಾರ್ಯಯೋಜನೆಗೆ ೫ ಅಂಕ ಹಾಗೂ ಹಾಜರಾತಿಗೆ ೫ ಅಂಕಗಳನ್ನು ನೀಡುವುದು.



## ಕನ್ನಡ ಸ್ನಾತಕ ಅಭ್ಯಾಸ ಮಂಡಳಿ



**ಸಂಪಾದಕರ ವಿಳಾಸ**

**ರಾಮರೆಡ್ಡಿ ಕೆ.**
ಸಹಾಯಕ ಪ್ರಾಧ್ಯಾಪಕರು,
ಕೆ.ಎಲ್.ಇ. ಸಂಸ್ಥೆಯ, ಎಸ್.ವಿ.ಎಸ್. ಬೆಳ್ಳುಬ್ಬಿ ಮಹಾವಿದ್ಯಾಲಯ
ಸವದತ್ತಿ–591126. ಬೆಳಗಾವಿ ಜಿಲ್ಲೆ

**ಡಾ. ರಾಜಶೇಖರ ಬಿರಾದಾರ**
ಸಹಾಯಕ ಪ್ರಾಧ್ಯಾಪಕರು,
ಸಿ. ಎಂ. ಮಾಮನಿ ಸರ್ಕಾರಿ ಪ್ರಥಮ ದರ್ಜೆ ಕಾಲೇಜು,
ಯರಗಟ್ಟಿ–591129 ಬೆಳಗಾವಿ ಜಿಲ್ಲೆ